ಕನ್ನಡ ಕಾವ್ಯಮಾಲೆ—೫೪

# 'ಗಣೇಶ ದರ್ಶನ'

ಪು. ತಿ. ನರಸಿಂಹಾಚಾರ್



ಪ್ರಕಾಶಕರು :

ಕಾವ್ಯಾಲಯ

ಮೈಸೂರು

# ತೀರ್ಥರೂಪರನ್ನು ನೆನೆದು

ತನ್ನ ರಸವಂತಿಕೆಯ ಸೌಭಾಗ್ಯದಲ್ಲಿ
ತನ್ನ ತರುಮೂಲಕ್ಕೆ ತನ್ನರಳ ಚೆಲ್ಲಿ
ಕೃತಕೃತ್ಯವಪ್ಪಂತೆ ರೆಂಬೆ, ನಾನಿಂದು
ತಾಯ್ನೆಲದೊಳಿವ ಚೆಲ್ವು ನಿಮ್ಮ ವರವೆಂದು.

# ಅರಿಕೆ

ಕೃತಿನೇಪಥ್ಯ ಮತ್ತು ಕೃತಿಫಲ ಇವೆರಡರ ವಿವರಣೆಯ ಮೇಲೆ ಕಾವ್ಯ ಮೀಮಾಂಸೆ ಸಹಜವಾಗಿ ಪ್ರವರ್ತಿಸುತ್ತದೆ. ಕವಿಯ ಅರಿಕೆಯಲ್ಲಿ ಕೃತಿನೇಪಥ್ಯದ ವಿಚಾರ ಸ್ವಲ್ಪ ನಡೆಯಬೇಕೇನೋ. ಈ ಕವಿತೆಗಳನ್ನು ಈಗ ಓದುವಾಗ ನನಗೆ ಇವು ಯಾವೊಂದು ಸಿದ್ಧಾಂತದ ದೃಷ್ಟಿಯಿಂದಲೂ ರಚಿತವಾಗಿರುವ ಹಾಗೆ ತೋರುವುದಿಲ್ಲ. ಇವೆಲ್ಲಕ್ಕೂ ಒಂದು ಮಟ್ಟದ ಸಿಲುವಿಲ್ಲ. ಅವುಗಳ ಬಗೆಯೂ ಬಗೆಬಗೆ. ಆತ್ಮಪ್ರಕಾಶನ, ಆತ್ಮವಿಕಾಸನ, ಭಾವಾನುವಾದನ, ಭಾವಪರಿಷ್ಕರಣ, ರಸದ್ಯೋತನ, ಅನುಕರಣ, ಅನುರಣನ, ಬೋಧನ, ವಿವಕ್ಷೆ, ಆನಂದ, ಆನಂದಾ ಭಾಸ, ಸೃಷ್ಟಿ, ದೃಷ್ಟಿ, ಇತ್ಯಾದಿ ಸಿದ್ಧಾಂತಗಳ ಒರೆಗಲ್ಲಿನಲ್ಲಿ ಇವುಗಳ ಬಣ್ಣವನ್ನು ತೀಡಿ ನೋಡಬೇಕೆಂಬ ಚಪಲ ನನಗುಂಟು. ಆದರೆ ಅದನ್ನು ತಜ್ಞರಿಗೆ ಬಿಡುವು ದೊಳ್ಳೆಯದೆನ್ನಿಸುತ್ತದೆ. ಏಕೆಂದರೆ, ಸ್ವಂತ ಕೃತಿಗಳನ್ನು ಕವಿ ವಿಮರ್ಶಿಸಿಕೊಳ್ಳು ವಾಗ, ಆತನ ಬುದ್ಧಿ ಆತ್ಮಾನುಕಂಪ ಇಲ್ಲವೇ ಆತ್ಮಪ್ರಶಂಸೆ ಇವೆರಡು ತುದಿಗಳಿಗೆ ತೂಗುಯ್ಯಾಲೆ ಆಡುತ್ತದೆ. ಸಮಸ್ಥಿತಿ ಚೆಂದ. ಆದುದರಿಂದ, ನಾನು ಈ ಕೃತಿ ಗಳನ್ನು ನನ್ನಿಂದ ಆದಷ್ಟು ದೂರ ಇರಿಸಿ, ಸ್ವತಂತ್ರವಾಗಿ ಮಾಡಿ ಸಹೃದಯರಿ ಗೊಪ್ಪಿಸುವುದು ಒಳ್ಳೆಯದು.

ಈ ಕವನಗಳಲ್ಲಿ ಮುಖ್ಯ ಕೃತಿಯಾದ "ಗಣೇಶದರ್ಶನ" ಮೊದಲಾಗಿ ಹಲ ವಾರು ಪದ್ಯಗಳು ಮಿತ್ರರ (ಅಂದರೆ ಮುಖ್ಯವಾಗಿ ಸಂ. ಶಿ., ತೀ. ನಂ. ಶ್ರೀ., ಮತ್ತು ಗೊ. ರಾ.) ಪರಾಮರ್ಶಕ್ಕೆ ಪಾತ್ರವಾಗಿ ಅವರ ಪ್ರಸಾಧನ ವಿಧಾನದಿಂದ ಕಾಂತಿಗೊಂಡಿವೆ. ಇವರ ಕುಶಲವಾದ ಕೈವಾಡವನ್ನೂ ಮೀರಿ ನಿಂತಿರುವ ಭಾವಾಕ್ಲೇಶಗಳು ಇವುಗಳಲ್ಲಿ ನನಗೇ ತೋರಿಬಂದಿವೆ ಎಂದ ಮೇಲೆ ಕಾವ್ಯ ಮಜ್ಞರ ರುಚಿಗೆ ಅವು ತಪ್ಪಿಸಿಕೊಳ್ಳುವುವೇ ? ಈ ಕ್ಲಿಷ್ಟತೆ ನನ್ನ ಸ್ವಭಾವಕ್ಕೇ ಸೇರಿದುದೇನೋ. ಅದು ದೋಷವೇ ಹೊರತು ಭೂಷಣವಲ್ಲ. ಅದನ್ನು ಮತ್ತೊ ಬ್ಬರಿಗೆ ಆರೋಪಿಸುವಂತೆಯೂ ಇಲ್ಲ, ಮರೆಸುವಂತೆಯೂ ಇಲ್ಲ. ಆದರೆ ಗುಣ

ಗಳೋ? "ವಸಂತಿ ಹಿ ಪ್ರೇಮ್ಣಿ ಗುಣಾ ನ ವಸ್ತುನಿ." ಭಾರವಿ ಕವಿ ಈ ಸತ್ಯವಾದ ಮಾತಿನಿಂದ ನಾನು ನನ್ನ ಕೃತಿಗಳ ವಿಷಯದಲ್ಲಿ ಆಗಾಗ ಪಡುತ್ತಿದ್ದ ಅಹಂರತಿಯನ್ನೂ ಭಗ್ನಮಾಡಿಬಿಟ್ಟಿದ್ದಾನೆ. ನಿಜವಾಗಿ—ವಸಂತಿ ಹಿ ಪ್ರೇಮ್ಣಿ ಗುಣಾ—ನ ವಸ್ತುನಿ. ಆದುದರಿಂದ ನನ್ನ ಕವನಗಳ ವಿಚಾರವಾಗಿ ನಿರಂತರವಾದ ಆದರವನ್ನು ತೋರಿ ನನಗೆ ಕಾವ್ಯೋತ್ಸಾಹವು ಕುಂದದಂತೆ ಸ್ಫೂರ್ತಿಯನ್ನು ಕೊಡುತ್ತಿರುವ ಮಿತ್ರವೃಂದಕ್ಕೂ ಸಹೃದಯ ಗೋಷ್ಠಿಗೂ ನಾನು ನನ್ನ ಕೃತಜ್ಞತೆಯನ್ನು ಬಹುವಾಗಿ ಸಮರ್ಪಿಸುತ್ತೇನೆ.

ಬೆಂಗಳೂರು, ಪು. ತಿ. ನ.

ಸರ್ವಜಿತ್ ಸಂ. ಜ್ಯೇಷ್ಠ ಬಹುಳ ದ್ವಾದಶೀ.

# ಪರಿವಿಡಿ

# ಗಣೇಶ ದರ್ಶನ

## ೧

ದೇವರನೆರೆಯದೆ ಕಾವ್ಯದ ರಚನೆಯೆ
ನುತಿಯುರಿ ಇಲ್ಲದೆ ಭಾವದ ಪಚನೆಯೆ ?
ತಪ್ಪಿದೆನಾದೊಡೆ ತಿದ್ದುವೆನೀಗ
ದೇವತೆಯೊಂದನು ನೆನೆ ಮನ ಬೇಗ—
ಎನಲೀ ನಗೆಬಗೆಗಿಂಬಾಗುತ್ತ
ಬಂದಿತು ಬೆನಕನ ಭಾವನೆಯಿತ್ತ.

ಬುದ್ಧಿಯ ನೀಡೈ ಗಣಾಧಿನಾಯಕ
ಸಿದ್ಧಿಯ ತೋರೈ ಗಣಾಧಿನಾಯಕ
ವಿಘ್ನನಿವಾರಕ ಗಣಾಧಿನಾಯಕ
ಹೆಗ್ಗಣವೇರುವ ಗಣಾಧಿನಾಯಕ
ಆನೆಯ ಮೊಗವಾಡವ ಧರಿಸಿದನೇ
ಡೊಳುಹೊಟ್ಟೆಗೆ ನಾಗರ ಬಿಗಿದವನೇ
ಶಶಿಪೋರನ ನಗೆಗಿಂಬಾದವನೇ
ದಯಮಾಡಯ್ಯಾ ದಂತಾಯುಧನೇ—

ಇಂತಾಚಾರ್ಯರ ಅನುಮತಿ ಇಲ್ಲದೆ
ಸಮ್ಮತ ವಿಷ್ವಕ್ಸೇನರನೊಲ್ಲದೆ
ಚೌತಿಯ ದಿನದೊಳು ಬೆನಕನ ಭಾವಿಸೆ
ನನ್ನ ಬಳಿಗೊಂದು ಮೂಷಕ ಧಾವಿಸೆ
ಗಜಮುಖನೈತಂದನೊ ಎನ್ನುತ ನಾ
ಸಂಭ್ರಮಿಸುತ ಕಂಡೆನು ಸನ್ನುತನ.

"ಕಡುಬಿಲ್ಲವೊ ಕಡುಬಿಲ್ಲವೊ ಇಲ್ಲ
ನನಗೆ ಏಕೆ, ವಾಹನಕೂ ಇಲ್ಲ
ಪೂಜೆಗೈದು ಮೊರೆಯಿಡುತಿಹರೆಲ್ಲ
ಭಕುತರನೇ ಬೇಡಲು ಬಾಯಿಲ್ಲ.
ಎನ್ನಾರಾಧಿಪ ಮೋಹವ ಬಿಟ್ಟಿಹೆ
ಆದೊಡೆ ನನ್ನೊಳು ನೇಹವನಿಟ್ಟಿಹೆ

ಹಿರಿತನಕೂ ಕೆಳೆತನವೇ ಮಿಗಿಲು
ಇದರೊಳಿಲ್ಲ ವೈಚಿತ್ರ್ಯದ ದಿಗಿಲು
ಅದಕೈತಂದೆನು ನಿನ್ನೆಡೆಗಿಂದು
ಕಡುಬಂ ತಣಿವಂದಂ ನೀಡೆಂದು "—
ಎನ್ನುತ ಪಕ್ಕದ ಕುರ್ಚಿಯ ಪೀಠದಿ
ಸುಖದಾಸನವಂ ಕೊಂಡಿಹ ಮಾಟದಿ
ದುಂಡನೆ ಕಾಲ್ಗಳ ಮೇಲೆತ್ತಿಟ್ಟು
ಹೊಟ್ಟೆಯ ಮೇಗಡೆ ಸೊಂಡಿಲನಿಟ್ಟು
ಶಿವನುರಿಗಣ್ಣಿನ ಬೆಳ್ದಿಂಗಳೊ ಎನೆ
ನೋಟದ ಮಂದಸ್ಮಿತರುಚಿ ತಣ್ಣನೆ
ತೇಜವ ಸೂಸುತಲೆಲ್ಲೆಡೆ ಬೆಳಗೆ
ಆತ್ಮದ ಹಾವಸೆ ಬೇಸರ ತೊಲಗೆ
ಕಂಗಳ ಥಾಳದೊಳೆನ್ನಂ ತಿವಿದು
ನಾ ಸಡಗರಗೊಳೆ ತಾನದ ಸವಿದು
ಇಂತೆಸೆ ಬಂಧುವಿನಂದದಿ ಬೆನಕಂ
ಋದ್ಧಿಬುದ್ಧಿಸಿದ್ಧಿಪ್ರದಾಯಕಂ,
ನಮ್ರನಾಗಿ ಗೈದೆನು ಶರಣಾರ್ತಿ :
" ಸ್ವಾಗತ ಮಂಗಳವಿನೋದಮೂರ್ತಿ
ಸಕಲಸುರಾಸುರ ಗಣಂಗಳರ್ತಿ
ದೇಶವಿದೇಶಸುವಾಸಿತ ಕೀರ್ತಿ
ವ್ಯಾಸಸ್ಫೂರ್ತಿಗೆ ನಡೆಕೋಲಾದನೆ
ಮರುಳ್ಗಳ ಹುರುಳೇ ಎಡರಾಳುವನೇ
ಏ ಬಿನದಕೆ ನನ್ನೆಡೆಗೈತಂದೆ
ವ್ರಾತ್ಯನೆಡೆಗೆ ದೇಹಿ ಎಂದು ಬಂದೆ ?
ನನ್ನ ಗೃಹಿಣಿ ಭೋಜನದಧ್ಯಕ್ಷೆ
ಮನೆವಾಳ್ತನದೊಳು ಬಲುಬಲು ದಕ್ಷೆ
ಅವಳಾಳ್ತನದೊಳೆ ನನ್ನಯ ರಕ್ಷೆ
ಮೀರೆ ವಿಧಿಸುವಳು ಭಿಕ್ಷೆಯ ಶಿಕ್ಷೆ.
ಮೋದಕ ನೈವೇದ್ಯವನೆಣೆಗೈಯೆ
ನೆಪವೇನಂ ಪೇಳಲಿ ನಾನಾಯೆ

ಎಲ್ಲರ ಕಾರ್ಯಕು ನೀನೆ ಉಪಾಯ
ಈ ಪೂಜೆಗು ನೀನಿಡು ತಳಪಾಯ ".

ಎನ್ನೆ ನಾನು ನಸು ಚಿಂತಿಸಿ ಬೆಸಕಂ
ಕರ್ಣಾಸ್ಫಾಲಿತ ಲಲಾಟಫಲಕಂ
ಮೊಗಗಿಂ ಕಿವಿತೆಗೆದೆನಗಿಂತೆನುವಂ
" ಅತ್ತು ಕಾಡಿ ಅಮ್ಮನ ಗೋಗರೆವಂ
ನೆರೆಮನೆ ಮೂರ್ತಿಯ ನೋಡುತಲೆಳೆಯ
ಸಂತೈಸಲು ಪೋ ನಿನಗಿದೆ ಸಮಯ."
ಎನೆ, ನಾನಾತನ ಭಾವವನರಿತು
ಹಸುಳೆಗೆ ಲೇಸೆಂದಾಳನು ಕುರಿತು
ಬಿಂಬವ ತರವೇಳ್ದಾಕೆಯನೆರೆದೆ
" ಮುದ್ದನ ಹರಸಲು ಗಣಪನ ಕರೆದೆ
ನಿರ್ವಿಧಿಯಾದರು ಕಡುಬನು ಮಾಡಿ
ಪೂಜಿಪುದೊಳ್ಳಿತು ಸುತನಂ ಕೂಡಿ."

ಇದನಾಲಿಸಿ ಕಂದನು ಕುಣಿದಾಡೆ
ತಂದ ಬಿಂಬವುಲ್ಲಸವನು ಹೂಡೆ
ಬಂದ ಬೆಸಕನದರೊಳು ಸುಳಿದಾಡೆ
ಈ ಆಟದೊಳಾಕೆಯ ಬಗೆ ಕೂಡೆ
ಅತಿಥಿಕಾರ್ಯವೆಡರಿಲ್ಲದೆ ನಡೆವ
ಕಡುಬಿನ ತುಷ್ಟಿಯ ಗಣಪಗೆ ಕೊಡುವ
ಯತ್ನದೊಳಾಶಂಕೆಯ ನಾ ನೀಗಿ
ಸ್ವಸ್ಥಾನಕೆ ಬರೆ ಬಗೆ ಲಘುವಾಗಿ ;
ಕಿವಿಯಾಡಿಸಿ ಕಣ್ ಕೊಂಕಿಸಿ ನೋಡಿ
ಬೆಸಕನೆಂದ " ಆಹ, ಎಂತಹ ಜೋಡಿ
ನಿಮ್ಮ ನೋಡುತಿರೆ ಕುದುರುವುದರಿವು
ಗಂಡಸಿನೊಡೆತನವೆಂದರೆ ಇದುವು
ಶ್ರುತಿಯೊಳಗಾಡುವ ಹಾಡಿನ ಶೆರದಿ
ಸ್ವತಂತ್ರ ನೀನೀ ಪಾರತಂತ್ರ್ಯದಿ

ಶಕ್ತಿಸಮಾರೋಪಣವೇ ಮದುವೆ
ಒಂದೆರಡಾಗುವ ತೆರವೇ ಮದುವೆ
ಭರಸಮರ್ಪಣದ ಮುಹೂರ್ತವೊದವೆ
ತಿರುಳನಿತ್ತು ನೆರಳಪ್ಪುದೆ ಮದುವೆ
ಹೆಣ್ಣಿಗೆ ಹುರುಳು ಗಂಡಿಗೆ ಮರುಳು
ಗಂಡಿಂತೊಡೆವುದೆ ಮದುವೆಯ ತಿರುಳು
ಈ ಒಡೆತನವೇ ದಿಟದೊಡೆತನವು
ನಿಮಗೆನ್ನಾಶೀರ್ವಾದದ ನೆರವು"
ಎನೆ, ಇದು ಭೂಷಣವೋ ದೂಷಣವೋ
ಈ ಬಿನದಿಗೆ ಕುತುಕವೆ ತೋಷಣವೋ
ಎಂದಿರೆ ನಾನಿದ ಗಣೇಶ ತಿಳಿದು
ಮಗುಳಿಂತೆಂದಂ ಬಿನದವ ತಳೆದು
"ಶಿವನೋ ಶಕ್ತಿಯೊ ಪರಮೇಶನೊಳು
ಹುರುಳಾರ್ಕೈ—ಶಕ್ತಿಯಲಾ ಹುರುಳು
ಸಿರಿಹರಿಯೊಳಗೂ ಸಿರಿಯೇ ಅಲ್ಲವೆ
ವಾಗರ್ಥದೊಳೂ ವಾಚವೆ ಅಲ್ಲವೆ
ಕೇಳ್ವಿಕಬ್ಬದೊಳು ಕೇಳ್ವಿಯೆ ಅಲ್ಲವೆ
ಬುಣಬುದ್ಧಿಯೊಳೂ ಬುದ್ಧಿಯೆ ಅಲ್ಲವೆ
ಮರುಳೂ ಹುರುಳೂ ಬೇರತಿರಲೊಳ್ಳಿತೊ
ಕವಲೊಡೆಯುತ ನೆರವಾಗುವುದೊಳ್ಳಿತೊ?
ಹುರುಳಿನೊಳಗೆ ಮರುಳಾಟವೆ ಲೇಸು
ಮಾಯೆಯೊಳಗೆ ಶಿವಲೀಲೆಯೆ ಲೇಸು
ಇರವಿನೊಳರಿವಿನ ಮರುಳೇ ನಲವು
ಸಚ್ಚಿದಾನಂದವೆಂಬುದೆ ಇದುವು
ನಿಮ್ಮಾ ದಾಂಪತ್ಯದೊಳಿದ ಕಾಂಬೆ
ಅಸ್ತು ಅಸ್ತು ಸ್ವಸ್ತಿ ಸ್ವಸ್ತಿ ಎಂಬೆ."

೨

ಇಂತೆನೆ ವಿಘ್ನೇಶಂ ನಗೆಗೂಡಿ
ಮರುಕೊಂಕಾಡಲು ನನ್ನನು ದೂಡಿ

“ ಒಂದೆರಡಪ್ಪುದೆ ಲೇಸೆಂದೆನ್ನುವೆ
ಒಂಟಿಯಾಗಿ ನೀನುಳಿದಿರೆ ಚೆನ್ನವೆ
ಗಜಮುಖನೇ ನಿನಗೆಂದಿಗೆ ಮದುವೆ
ನಿನ್ನಿಂದಾವಪ್ಸರಸಿಯು ಸಧವೆ ? ”
ಎನೆ, “ ಎಲ ದಿಟ್ಟ, ನಗುವೆಯ ನನ್ನ
ಎನಗೇತಕೆಯೋ ಮದುವೆಯ ಬನ್ನ !
ನನಗೀ ಗಣದೊಡೆತನವೇ ಸಾಕು
ನನ್ನೊಡೆತನ ಯಾವಬಲೆಗೆ ಬೇಕು
ಲಂಬೋದರಗೇತಕೆ ತರಳೋದರೆ
ಕುಂಭಶಿರಂಗೇತಕೆ ಬಿಂಬಾಧರೆ
ವಕ್ರತುಂಡಗಕ್ಕರಿಸುವರಿಹರೇ
ಮರುಳ್ಗಳೊಡೆಯಗೆ ಮರುಳಹರಿಹರೇ ?
ನನ್ನನು ನೆನೆಯುತ ನಾನೇ ನಗುವೆ
ಹೆಣ್ಣೊಲ್ಲದ ರೂಪಕೆ ಗೆಲ್ ಎನುವೆ
ಈ ನಿಡುಮೂಗನು ನಾನೇ ಬಯಸಿದೆ
ಈ ಹಿರಿಕಿವಿಯನು ನಾನೇ ಬಯಸಿದೆ
ಈ ಕಿರುಕಂಗಳ ನಾನೇ ಬಗೆದೆ
ಗುಜ್ಜುಕಾಲು ಪೇರುದರಕ್ಕೊಲಿದೆ
ವಾಹನಕಿಲಿಯನೆ ನಾನಾರಿಸಿದೆ
ಎಡರೊಡೆತನವನು ನಾನೇ ವರಿಸಿದೆ
ಎನ್ನ ಕಜ್ಜಕೀ ಪರಿಕರ ಹವಣು ”
ಎನಲವನಂ ತಡೆದಾನಿಂತೆಂದೆನು
“ ಕ್ಷಮಿಸು ಗಣಪ ನಾನರಿತುದೆ ಬೇರೆ
ನಿನ್ನ ಕುರಿತು ನೀನೊರೆವುದೆ ಬೇರೆ.
ಶಿವನಾವಿಲ್ಲದೆ ನಿನ್ನಂ ಕಡೆದು
ಕಾವಲಿಡಲು ಶಿವೆ, ಶಿವನಂ ತಡೆದು
ಶಿರವನಳಿಯೆ, ಹರಿ ಗಜಮಂ ತರಿದು
ತಲೆಯಂಟಿಸೆ ನೀನಾದೆ,—ಕತೆಯಿದು.
ನಿನ್ನಿಚ್ಛೆಗೆ ನೀನಾದುದು ನನ್ನಿಯೊ
ನಿನ್ನ ಕುರಿತಿಂಥ ಕತೆಗಳೆ ನನ್ನಿಯೊ ”

ಎನೆ, “ಎಲ, ಎನಗಿಡುತಿಹೆ ದುರ್ಬೀನ
ಎನ್ನ ನುಡಿಸೆ ನಿನಗಿಲ್ಲ ಸಮಾನ.
ಯಕ್ಷನೊ ರಕ್ಷಸೊ ಚೌಕದ ಭೂತವೊ
ಮುಗ್ಧರ ಭೀತಿನಿವಾರಣಹೇತುವೊ
ಹಾದಿಯೊಳಿದ್ದನೊ ಬೀದಿಯೊಳಿದ್ದನೊ
ಬಾನಿಂ ಬಿದ್ದನೊ ಗಂಗೆಯೊಳಿದ್ದನೊ
ಭವನೇ ಬಗೆದನೊ ಭವೆಯೋ ಅರಿಯೆ
ಆರುಮರಿಯರೀ ಸಂದೆಗ ಹರಿಯೆ
ಋಷಿ ಕವಿ ಯಾರೂ ಬಣ್ಣಿಸಲಿಲ್ಲ
ಕಾಳಿದಾಸಗೂ ನನ್ನರಿವಿಲ್ಲ
ಇರಲಾದೊಡೆ ನಾನಿದ್ದೇ ಇದ್ದೆ
ಎಡರಾಳುವ ಕಲೆಯೊಳು ನುರಿತಿದ್ದೆ
ಮರುಳರ ಮೊರೆಯಾಲಿಸೆ ಕಲಿತಿದ್ದೆ
ಇದರಿಂದೆಲ್ಲರ ಚಿತ್ತದೊಳಿದ್ದೆ.
ಬಯಕೆಸಲಿಕೆಯಂತರವೇ ವಿಘ್ನ
ಎಲ್ಲಾಸೆಗು ಭವವಿದು ಗಳದಘ್ನ
ತೇಲಿಸ ಕಲಿತರೆ ಅದೆ ವಿಜ್ಞಾನ
ಇದರೊಳಿಲ್ಲ ನನಗಿಂತಲು ಜಾಣ
ವಿಜ್ಞಾನದ ಅಧಿದೇವತೆ ನಾನು
ಔಚಿತ್ಯವನೆನ್ನಂಗದಿ ಕಾಣು :
ಹಿರಿದೆನ್ನ ಮತಿ ಮೇಣಿದು ನಿಶಿತ
ತಿಳಿ ಮತಿವಂತಗೆ ನಿಡುಮೂಗನುತ
ಈ ಸೊಂಡಿಲ ಚೆಲುವೆನ್ನಗ್ಗಳಿಕೆ
ಹೊಳಪಿನ ತಿಣ್ಣಾರಿವಿನ ಬತ್ತಳಿಕೆ.
ಆಲಿಸ ಬಲ್ಲವನಾಳಲು ಬಲ್ಲ
ನೋಡೀ ಹಿರಿಕಿವಿ ಇದಕೆಣೆಯಿಲ್ಲ
ಎಲ್ಲವನಾಲಿಪೆ ಸೊಂಡಿಲೊಳಿಡುವೆ
ಎಲ್ಲಕು ಒಂದುತ್ತರ ಓಂ ಎನುವೆ
ಹಲವರನಾಲಿಸು ಒಂದನೆ ಹೇಳು
ಇದ ಕಲಿತಗೆ ನೆಮ್ಮದಿ ಸಿರಿಬಾಳು.

ಕಾರ್ಯೈಕಾಗ್ರತೆಗೀ ಕಣ್ಣೆ ಸರಿ.
ಸರ್ವೋಪಶಮನಕೀ ಉದರ ಸರಿ
ಉಂಡಿರುವವನೇ ಶಾಂತಿಯ ಬಲ್ಲ
ಉಣ್ಣಲು ಬಲ್ಲವ ತುಷ್ಟಿಯ ಬಲ್ಲ
ಇವನುಳ್ಳಗೆ ಪುಷ್ಟಿಯು ಹೊರತಲ್ಲ
ಇಂಥವಗೊಲಿವುದು ಈ ಜಗವೆಲ್ಲ
ಈ ಲಂಬೋದರವೆನ್ನಯ ಪೆರ್ಮೆ
ಇದರಿಂ ದೊರೆಯಿತು ಎಲ್ಲರ ಕೂರ್ಮೆ
ಇದೆ ಕುರುಹಲ್ಲವೆ ಕೃತಕೃತ್ಯತೆಗೆ
ಎಡರಿಲ್ಲವ ಗೆದ್ದಿಹ ಸತ್ಯತೆಗೆ
ಇದರಿಂದಲೆ ಬಗೆಯಪ್ಪುದು ಸ್ತಿಮಿತ
ಮಂದಿಯ ನಂಬುಗೆ ಇಂಥನೊಳಮಿತ.
ಅರಿವಿನ ಕಣಜಕೆ ಕನ್ನವನಿಡಲು
ಸೃಷ್ಟಿರಹಸ್ಯವ ಭೇದಿಸಿ ಬಿಡಲು
ಇಲಿಗೂ ಮಿಕ್ಕಿಹ ದಕ್ಷರದಾರು
ವಿಜ್ಞಾನಕೆ ಇಲಿಯೊಲ್ಲದರಾರು
ಈ ಮರ್ಮವನರಿತಿದಕಾನೊಲಿದೆ
ಇದರಿಂ ವಿಘ್ನೇಶಂ ನಾನಾದೆ.
ಎನ್ನಯ ಸಾಮುದ್ರಿಕವಿಂತಿರಲು
ನಂಬಿದರಿಂಬಿನೆ ಜನ ಮೆಚ್ಚಿರಲು
ಶಿವಗಾಯಿತು ಮರುಳ್ಗಳ ಬಲುಕಾಟ
ಶಿವೆಗೇಕಾಂತವೆ ಇಲ್ಲದ ಮಾಟ
ಇಬ್ಬರು ಒಟ್ಟಿಗೆ ಬಯಸಿದರೆನ್ನ
ತಪ್ಪಲು ತಮಗಿವನಾಳುವ ಬನ್ನ
ಇಂಥವನಿಹನೇ ಎಂದರಸಿದರು
ಎನ್ನ ಕಂಡು ಮುದದಿಂ ಹರಸಿದರು
ಇವ ಮತಿವಂತ ಅಂತೆಯೆ ಶಾಂತ
ಮರುಳ್ಗಳ ಪಡೆಗಳಿಗಿವನೇ ಕಾಂತ
ಎಂದೆನ್ನನು ಕೈಲಾಸಕೆ ತಂದು
ಕಂದಾ ನೀನೆಮ್ಮಾರಸನೆಂದು

ಭಾವಿಸಿ ತೋರಿದರೆನ್ನನು ಜಗಕೆ
ಅಂದಿಂ ಸಂದೆನು ನಾನೀ ಜಸಕೆ.
ಕಷ್ಟ ಕಷ್ಟವೀ ಗಣವಾಳ್ವಾಟ
ಏ ಬಣ್ಣಿಸಲೀ ಬಳಗದ ಕೂಟ !
ಒಬ್ಬೊಬ್ಬನಿಗೊಂದೊಂದೇ ಬೆರಗು
ಶಿವನವನಲ್ಲದೆ ಮಿಕ್ಕುದು ಹೊರಗು
ಮೈ ಮಾಟದೊಳೂ ಕೂಟವೆ ಇಲ್ಲ
ಸಮರಸವಿಲ್ಲದೆ ಒಸರವೆಲ್ಲ—
ಈ ಒಸರುಗಳ ನಾ ಜೋಡಿಪೆನು
ಭವ್ಯದ ಕರುಮಾಡವನಾಗಿಪೆನು
ಅಲ್ಲಪ್ಪುದು ಪರಮೇಶ್ವರನೋಲಗ
ಸಭೆಗುಲ್ಲಸ ತರುವುದೆ ಸನ್ನೊಳಿಗ
ಭಾವುಕರೆಲ್ಲರು ಅಹ ಅಹ ಎನ್ನೆ
ಹುಬೊಮ್ಮರೆ ಸೈ ಸೈ ಲೇಸೆನ್ನೆ
ಗೌರಿಯ ಮಿದುನಗುವೆನ್ನನು ಜೋಡಿಸೆ
ರುದ್ರನ ಭದ್ರಸ್ಮಿತವನುವಾದಿಸೆ
ನಿಂತೆಡೆ ನಿಂತೆಯೆ ಗಣಗಳನಾಳ್ವೆ
ಎಲ್ಲರ ನಗಿಸುತ ಮೋದದಿ ಬಾಳ್ವೆ."

೩

ಇಂತೆಸೆ ಗಣಪಂ ತನ್ನ ಶಿರವನು
ಕೈಲಾಸಕೆ ತಾ ಬಂದ ಪರಿಯನು
ಇವನ ರಹಸ್ಯವನಿನ್ನು ಮರಿಯಲು
ಎನ್ನೋದುವರಿಗೆ ಮುಂದೆ ಬರೆಯಲು
ಇಂತೆಂದೆನು ನಾನವನಂ ಕುರಿತು
ಮೋದಕಗಳು ತಡವಪ್ಪುದನರಿತು
"ಕ್ಷಮಿಸು ಗಣಪ ನಿನ್ನಾಳಿಕೆಯೆಂತು
ಏನ ಗೈವೆ ಗಣ ವಶವಪ್ಪಂತು ?
ಶಿವನಲ್ಲದೆ ಬೇರೊಂದನೊಪ್ಪರು
ಅವನೊಳು ನಿಶ್ಚಯನೆಂದಿಗು ತಪ್ಪರು

ಅವರ ಭಕುತಿ ಕೈಲಾಸದ ತೇಜ
ಇಂಥ ಸ್ವತಂತ್ರರನಾಳುವ ರಾಜ
ನೀನಾಗಿಹೆ, ಎಂತಾಳುವೆ ಇವರ?
ಉಚಿತವಿದಾದೊಡೆ ಪೇಳಾ ವಿವರ"
ಎನಲವನಿಂತೆಂದನು ನಸುನಕ್ಕು
ಎನ್ನ ತೊಯ್ದು ನಯನಸ್ಮಿತದುಕ್ಕು:
"ಒಪ್ಪೊಪ್ಪುವ ಈ ಕಜ್ಜವು ಕಷ್ಟ
ಎಷ್ಟು ರಾಜನಿಗೊ ಕಷ್ಟವೆ ಇಷ್ಟ
ನಿಯಮವಿಡಲು ಪಾಲಿಸರಿವರ್ಲ್ಲ
ಇವರನಾಳ್ವ ಶಾಸನ ಶಿವ ಬಲ್ಲ
ಒಂದೆನ್ನುತ ಒಂದೊಪ್ಪುವರಿವರು
ಈ ಮಿತ್ರದೃಷ್ಟಿಯ ನಿಷ್ಠುರರಿವರು
ಒಂದಾದರು ಬಹುವೆನ್ನುವೆ ನಾನು
ಒಂದೇ ಎಂಬಗೆ ಸಗುವುದೆ ಜಾಣ
ಎಲ್ಲ ಮರುಳಿಗೂ ಅಂಕುಶ ಹಾಸ್ಯ
ಮನಕದರಿಂ ಪರಿವುದು ಮತದಾಸ್ಯ
ಕರಣಾಕಂತೊ ಸೃಷ್ಟಿಯ ವೈವಿಧ್ಯ
ಅಂತೆಯೆ ಮನಕೂ ಮತಮತ ಹೃದ್ಯ
ಒಂದೆನ್ನುವ ಬಗೆ ಮರಳಿನ ಕಾಡು
ಬಹುವೆನ್ನುವ ಮತಿ ಬುದ್ಧಿಯ ಬೀಡು
ರಸಸಮೃದ್ಧಿಯೇ ಬುದ್ಧಿಯ ಸಿದ್ಧಿ
ಸ್ವರಸನಲಾ ವ್ಯೋಮಕಪರ್ದಿ.
ಗುಣಗಣಕೂ ಭವನಸುಭವ ಬೇರೆ
ಅನುಭವದಂತನುರಾಗವು ಬೇರೆ
ಒಬ್ಬನ ಬಣ್ಣನೆಯೊಬ್ಬನು ಅರಿಯ
ತನ್ನ ದಿಟವೆ ದಿಟವೆಂಬುದ ಮರೆಯ
ಶಿವನೇಕಾಂಶವ ತೋರ್ಪನು ಭಕ್ತ
ಪೂರ್ಣಾಂಶವ ಬಿಂಬಿಸುವನು ಯುಕ್ತ
ಭಕ್ತರ ರಸಸಂಯುಕ್ತರ ಮಾಡಿ
ನಲಿಸುವುದೆನ್ನಯ ಸರಸದ ಮೋಡಿ

ನಾ ಗಣದುದ್ಯಾನದ ಮಂದಾನಿಲ
ಎನ್ನಿಂದೆಲ್ಲರ ಮನ ಮುದಚಂಚಲ.
  ಭೃಂಗಿಯ ನಾಟ್ಯಕೆ ನಂದಿಯ ನಗಿಸುವೆ
ನಂದಿಮೃದಂಗಕೆ ಭೃಂಗಿಯ ನಗಿಸುವೆ
ಒಬ್ಬನ ಮುಂಗಡೆಯೊಬ್ಬನು ಕುಣಿವನು
ಹಾಸ್ಯದೊಳೊಬ್ಬನಿಗೊಬ್ಬನು ಮಣಿವನು
ಇಬ್ಬರಿಗೂ ಚಪ್ಪಾಳೆಯನಿಡುವೆ
ಅವರೊಡನವರಿಗೆ ನಾನೂ ಮಣಿವೆ.
ತುಂಬುರು, ತಂಡುವು ಡಿಂಡಿಮ ಬಾಂಸ,
ಕೈಯೊಳು ಕಿಂಕುರ್ವಾಣವ ತೋರಿಸೆ
ಮೌನದೊಳಿಬ್ಬರಿಗೂ ತಲೆದೂಗುವೆ
ಕೊಂಕಿನ ಕೇಕರದೊಳು ಸಭೆ ನೋಡುವೆ.
ನಾರದ ವ್ಯಾಖ್ಯಾನವ ಮಾಡುತಿರೆ
ಅಗಸ್ತ್ಯನದಕ್ಕೆ ತೂಕಡಿಸುತಿರೆ
'ಈತನ ತಪವಿನ್ನೂ ತೀರದಿರೆ
ಪಿಷ್ಟಕೆ ನಿಮ್ಮಯ ವಾಣಿಯ ತಂದಿರೆ'
ಎನ್ನುವೆ ನಾ ಮುನಿದೋತ್ತರವೇಳದು
ಈ ಋಷಿಯೆಚ್ಚರೆ ಸಭೆನಗೆ ಹೋಳದು.
ಕನ್ನಡಿ ಮುಂಗಡೆ ಅಣಕವನಾಡಿ
ನಗುವೊಲು ಮಕ್ಕಳು ತಮ್ಮನೆ ನೋಡಿ
ಗಣಗಳಿಗಂದಿನ ನೆನಪನು ತರುವ
ತಕ್ಕರೊಳಾಡಿಪೆ ದಕ್ಷಾಧ್ವರವ.
ಹರನನೆ ನಗುವೆವು ಭಸ್ಮಾಸುರದಿ
ನಾನೇ ಮೋಹಿನಿಯಂದಿನ ವೇಷದಿ.
ಇಂಥ ವಿನೋದದಿ ಶಿವ ಶಿವ ಎನುವೆವು
ಮೋದದ ಭಾರಕೆ ಶಿವ ಶಿವ ಎನುವೆವು
ಹಿರಿಕಿರಿದೆನ್ನದೆ ಶಿವ ಶಿವ ನಗುವೆವು
ಎಲ್ಲರ ಮರುಳಿಗು ಶಿವ ಶಿವ ನಗುವೆವು
ಈ ಮೋದದಿ ಹೊಳೆವುದು ಶಿವನ ಕಳೆ
ಹೊಳಹಿಂ ಮುಡಿಯೆಳವೆರೆ ತೇಜಗೊಳೆ

ಎಲ್ಲೆಡೆ ಉಜ್ಜ್ವಲಿಪುದು ಶಿವನಿರವು
ಗಣಿಕಪ್ಪುದು ಬಗೆ ಬಣ್ಣದ ಮರವು
ಎನ್ನಿಂ ಯುಕ್ತಸ್ವರಸಂಕಲನ
ಭವನಾಡಿಪ ಹಾಡಿನ ಸಂಚಲನ
ನಾ ಗಣಗಳನಾಳುವ ಗುಟ್ಟಿದುವು
ಒಂದಕೆ ಬಹುವೊಂದಿಪ ಹವಣಿದುವು
ಎನ್ನಿಂ ನೋಡುತಲೊಲಿಯದರಿಲ್ಲ
ಒಲುಮೆಗು ಮಿಕ್ಕಿಹ ಲೇಸಿನ್ನಿಲ್ಲ."

೪

ಇಂತೆನೆ, ನಾನೀ ಹಾಸಶಕ್ತಿಯಂ
ಹೊಗಳಲು ಮೊದಲಿಡೆ—"ಸಾಕು ಭುಕ್ತಿಯಂ
ನೀಡು, ಹಸಿದಿಹನ ಕಾಯಿಸುವರೆ ಪೇಳ್
ಕಡುಬಾಯಿತೋ ಇಲ್ಲವೊ ಪೋ ಪೋ ಕೇಳ್"
ಎನ್ನುತ ಸಂಬೋಧಿಸೆ ಗಜವದನಂ
ಉಪಚರಿಸಿದೆನೋ ಅತಿಥಿದೇವನಂ
ಎಂದು ಬೆಚ್ಚುರುತ ನಾನೊಳ್ಪೋಗಿ
ನೋಡುವೊಡೆಲ್ಲವು ಸಜ್ಜಿತವಾಗಿ
ಹಬ್ಬದೊಲಿರೆ ನಾನಚ್ಚರಿಗೊಳುವೊಲು
ಅಷ್ಟಮಿ ಕೃಷ್ಣನ ಹಸೆಮಂಟಪದೊಲು
ಮಂಟಪವಾಗಿರೆ ಕಂದನ ಕಾರಣ,
ಬಾಳೆಯ ಕಂದಿನ ಕಂಬದ ತೋರಣ
ಓರಣವಾಗಿರೆ ಪೂಜಾದ್ರವ್ಯಕೆ
ಎಳೆಯರೆ ತಂದಿರೆ ಹಸುರೆಳಗರಿಕೆ
ಗಂಧಾಕ್ಷತೆ ಫಲಪುಷ್ಪಪತ್ರಗಳ್
ಚಿತ್ರಾಲಂಕೃತದಾರತಿ ತಟ್ಟೆಗಳ್
ಚೆಂದದಿ ರಂಜಿಸೆ ಬಿಂಬದ ಮುಂದೆ
ಬೆಸಕನ ಬಳಿಗೋಡುತ ಬೆರಗಿಂದೆ
"ದಯೆಗೈ ಪೂಜೆಗೆ ದಯೆಗೈ ಮನ್ನಿಸು
ಆತಿಥ್ಯವ ಕೊಳು ಕೃತಕೃತಿಯೆನ್ನಿಸು"

ಎಂಜಿನಗಾತಂ ನಗುತ್ತೈತಂದಂ
ನಮ್ರ ಸ್ವಪೆ ನಡೆತರುವೊಲು ಬಂದಂ
ಉತ್ಸವೋತ್ಸಾಹವಿಸ್ಮಿತನಾದಂ
ಪ್ರಸನ್ನವದನಂ ಸಸ್ಮಿತನಾದಂ
ಅರ್ಘ್ಯಪಾದ್ಯವಾಚಮನೀಯಂಗಳ
ದಧಿಮಧುಕ್ಷೀರಾದ್ಯಭಿಷೇಕಂಗಳ
ದೂರ್ವಾಂಕುರ ಪತ್ರಾರ್ಚನೆಗಳನು
ಸುಮಮಾಲಾಲಂಕಾರಂಗಳನು
ತಾಳ್ಮೆಯಿಂದ ವಿಘ್ನೇಶಂ ಕೊಳುತ
ಕಡುಬಿನ್ನೂ ಬರಲಿಲ್ಲವೆ ಎನ್ನುತ
ಪ್ರಶ್ನೆಯ ದಿಟ್ಟಿಯನೆನ್ನೆಡೆಗಿಡುತ,
ತುಸತಡವಾದರು ಹಬಿಯಾಡಿಸುತ
ಶುಭ್ರಾಭ್ರಷ್ಟವಿ ಮೋದಕ ಬರಲು
ಮುದವಾಂತಷ್ಟವಳಂ ಹರಸುವೊಲು
ಆ ನೈವೇದ್ಯವ ಭುಂಜಿಸುತಿರಲು
ಈ ತೃಪ್ತಿಯ ಸೊಗವೆಮಗಾಗಿರಲು,
ಸೂಕ್ತಿಗಳಿಂ ಸರಸೋಕ್ತಿಗಳಿಂದಂ
ಪರಿತ ಷಣ್ಮುಖನ ಮಾತುಗಳಿಂದಂ
ಭೋಜನದಾಯಾಸವ ತೀರಿಸುತ
ಷಡ್ರಸಂಗಳಿಗೆ ರಸವೇರಿಸುತ,
ದಳಪತಿಯಾಗುವ ಪೌರುಷ ಮಿಗಿಲೋ
ಗೃಹಪತಿಯಾಗುವ ಜಾಣ್ಮೆಯೆ ಮಿಗಿಲೋ
ಎನ್ನುವ ತರ್ಕದಿ ತಾನೇ ಗೆಲ್ಲುತ
ಈ ನಡುಮಾತೊಳು ಕಡುಬಂ ಮೆಲ್ಲುತ
ಜಿತಮನ್ಯುಗೆ ಪಗೆವರೆ ಇಲ್ಲೆನುತ
ಶಾಂತನೊಡನೆ ಸೆಣಸುವರಾರೆನುತ,
ನಕ್ಕ ಶಶಿಗಂದು ಮುಳಿದೆಯೇಕನೆ
ಆ ವಿಷಗಳಿಗೆಯ ನೆರೆ ಬಿಸದವನೆ
ನೆನೆದು ನಕ್ಕು, ಮುಳಿದುದು ದಿಟವೆನುತ
ಕಿತ್ತ ದಂತವಂ ನನಗೆ ತೋರುತ,

ಎಸೆವ ವೇಳೆಗಾ ಮುಳಿಸು ತೀರಲು
ಕೈಯೊಳೆ ನಿಂತಿತು ನೋಡಿದು ಎನಲು—
ಈ ತೆರ ಬಿನದದ ಮಾತುಗಳಿಂದಂ
ಆರೋಗಣೆಗೈಯುತ ಜಡುವಿಂದಂ
ತೃಪ್ತಿಯ ಸೂಚಿಸೆ, ಆರತಿಯೆತ್ತಿ
ನಮಿಸಲು ತಲೆಯಂ ಪಾದಕೆ ಒತ್ತಿ
ಹರಸುತೆಮ್ಮ ನಲವಿಂದೊಪ್ಪಿರ್ದಂ
ಗಿರಿಜಾತನುಜಂ ವಿಶ್ರಮಿಸಿರ್ದಂ.

*

ಇಂತಿರೆ ವಿಘ್ನೇಶಂ ತುಷ್ಟಿಯೊಳು
ನೆನೆಸುತೆಮ್ಮ ಕರುಣಾವೃಷ್ಟಿಯೊಳು
ಎಡರಿಲ್ಲದೆ ಪೂಜೆಯು ನೆರವೇರಿ
ಗೃಹಿಣೀಕುಮಾರರಿರೆ ನಲವೇರಿ
ದೇವಪ್ರಸಾದ ಭೋಜನವಾಗಿ
ಸಂಜೆಪೂಜೆಯಾರತಿ ಗಲವಾಗಿ
ನಡೆದಿರೆ—ನಾ ಪ್ರಶ್ರಿತವನು ಮರೆತು
ಶಿವನಾಟ್ಯವನೀ ಗಣಪನ ಹೊರತು
ಬಣ್ಣಿಪರಿನ್ನಾರೆಂಬ ಕುತೂಹಲ
ಬಗೆ ಮಿಗೆ, ಆ ಮೋದದ ಕೋಲಾಹಲ-
ದಾನಂದದ ಶೀಕರದಾಪ್ಲವನಂ
ಬೆಸಕನ ಬಣ್ಣನೆಯೊಳು ಬೀಡಲವಂ
ಎನ್ನಂ ಕಸಿಕೊಸುತಲಿಂತೆಂದು—
"ಎಂತದ ಬಣ್ಣಿಪೆ ನೀನಾವಂದಂ
ಭಾವಿಪ ಮನದಂತಿದರಾನಂದಂ
ಮುಕ್ತಿಯೊಳಪ್ಪೀ ಮೋದದ ಬಂಧಂ.
ಮನಸಾಳಿ ಕಂಪಿಡಲವನೆಡೆಗೆ
ಸೇತುವೆಯೆನೆ ಈ ಎಡೆ ಆ ಎಡೆಗೆ
ಭವವಂ ಮರೆತವನಂ ಮುಟ್ಟಲೆದೆ
ನಿದ್ದೆಯೊಳದು ಪದ ಪಿಡಿಯುವ ತೆರದೆ

ಏರಲಿ ಬಗೆ ಹಿಮಗಿರಿಯುನ್ನತಿಗೆ
ಗೌರೀಧವ ಗೌರಾಂಗನ ನುತಿಗೆ.
ನಿರ್ಮಲಜಲಕಲನಾದಾಹ್ಲಾದಿನಿ
ನವಶಶಿನಿರ್ಮಲದ್ಯುತಿಸಂವಾದಿನಿ
ಗಂಗೆತರಂಗಿಣಿ ಮಂಗಳವೆರೆಯೆ
ಹರ ಹರ ಪೊರೆಯೆಂದಮರರು ಮೊರೆಯೆ
ಶಿವ ಶಿವ ಶಿವದಿಡುತಿರೆ ಶರಣಗಣ
ರಚಿಸಿರೆ ನಾಲ್ಮೊಗ ಮಂತ್ರಾವರಣ
ಭವದ ನೆರಳು ಭಿತ್ತಿಯೊಳಾಡುತಿರೆ
ತುಂಬುರು ಮಾಧವರದ ನೋಡುತಿರೆ
ವಾಣಿಯಿರಲು ವೀಣೆಯ ಶ್ರುತಿಮಾಡಿ
ಚೆಲುವಿನೊಡತಿ ಲಕ್ಷ್ಮಿಯನೊಡಗೂಡಿ
ಒಂದೆಡೆ ಸಜ್ಜಾಗಿರೆ ಅಪ್ಸರೆಯರು
ಮತ್ತೊಂದೆಡೆ ಮೇಳದ ಗಂಧರ್ವರು
ಡಮರುಗವಾದಿಸುವಂದನುವಾದಿಸೆ
ಮೃದಂಗ ಡಿಂಡಿಮ ಡಕ್ಕೆಯ ಬಾರಿಸೆ
ಮರುಳ್ಗಣಿಯಾಗಿರೆ ಭೃಂಗಿಯೆಡೆ
ನಾಟ್ಯದ ನಾಯಕ ನಾಸಿರೆ ಪದದೆಡೆ
ಇರಲು ನಂದಿ ಭವಾನಂದಿ ವಂದಿ
ಶಿವನೆಚ್ಚರವಿವೆಚ್ಚರವೊಂದಿ ;
ತನ್ನಿರವಿಂದೆಲ್ಲರ ತುಂಬಿರುವಂ
ಪರಮಂ ಗೌರೀಯೋಗದೊಳಿರುವಂ.
ಪುರುಷನೊಳಂತರ್ಹಿತೆಯೆನೆ ಪ್ರಕೃತಿ
ಎನೆ ಈ ಯೋಗವಿಯೋಗವೆ ವಿಕೃತಿ
ಮೇಣೇ ಪುನರ್ಮಿಳನವೆ ಪರನಿರ್ವೃತಿ
ಎನಲೀ ಸಂಲೀನತೆಯೇ ಭವವೃತಿ—
ಅಣುವೊಳು ಗ್ರಹತಾರಾವಲಯದೊಳು
ಇಹ ಸಂಯಮವಂ ಫಾಲಾಕ್ಷದೊಳು
ತನ್ನೀಲನದಿಂ ತೋರುತಲಿಹನು
ಈ ಶಮದಿಂ ವಿಶ್ವಂಭರನಿವನು

ಸ್ಮರಹರನಸುರವರದ ಗಿರಧರನು
ಭಯಕರನಭಯಂಕರ ಶಂಕರನು
ಅರಿತರ ಗುರು ಮರುಳರೊಡೆಯ ಪರನು
ಶರಣರ ಮತಿ ಎಲ್ಲರ ಗತಿ ವರನು.

ಇಂತಿರೆ ಪರಮೇಶ್ವರನಾಸಂದದಿ
ನಾಭೀ ಕಡಲಿನ ಮೆಲ್ತೆರೆಯಂದದಿ,
ಇಂಗಡಲಿಂ ಸೊದೆಮೂಡುವ ತೆರದಿ
ಹರಿಯುರದಿಂ ಸಿರಿಯೇಳುವ ತೆರದಿ
ಇರುಳಾಗಸದಿಂ ತಾರಾಪಥದೊಲು
ಸುಷುಪ್ತಿಯಿಂದಂ ಸ್ವಪ್ನಂ ಬರುವೊಲು
ಬ್ರಹ್ಮೋದ್ಗೀಥದ ಸರಸತಿಯಂತೆ
ನಿರ್ಗುಣದಿಂ ಗುಣಮುಖಿಯೊಗೆವಂತೆ
ಮುಂಮೌನದಿನೋಂಕಾರದ ರೀತಿ
ಪರಾಶಕ್ತಿ ಹುಂಕಾರದ ರೀತಿ
ಹೊರಬರುವಳು ಶಿವನೆಡದಿಂ ಜಾರಿ
ಜಗನ್ಮಾತೆ ರುದ್ರಜಾಯೆ ಗೌರಿ.

ಬರುವಳು ಹೊಸ ತೇಜವ ಬೀರುವಳು
ಜಯಘೋಷಕೆ ಸ್ಮಿತವ ತೋರುವಳು
ವಾಣೀಸಿರಿಯರನಾದರಿಸುವಳು
ವಿಧಿಹರಿಗಳ ಕುಶಲವ ಕೇಳುವಳು
ನೇಹದೊಳೆನ್ನನು ನೇವರಿಸುವಳು
ಆನತಶರಣಗಣವ ಹರಸುವಳು
ಕೈಜೋಡಿಪ ಮರುಳ್ಗಳಿಗೊಲಿಯುವಳು
ನೋಟವೆರೆದು ನೆಲವ ನಲಿಸುವಳು.
ಈ ಸಾನ್ನಿಧ್ಯದಿ ಸಮಗತಿಹರ್ಷಂ
ನವಚೈತನ್ಯದ ವಿದ್ಯುತ್ಸ್ಪರ್ಶಂ
ಬಗೆಗಪ್ಪುದು ಸದ್ಭಾವೋತ್ಸಾಹಂ
ಆ ಭಾವಕು ಉಚ್ಚಾರೋತ್ಸಾಹಂ.

ವಾಣಿಯ ಕೈ ಪರಿವುದು ವೀಣೆಯೆಡೆ
ಮಾಧವ ಕೊಳಲೆತ್ತುವನಧರದೆಡೆ
ವಸಂತನುದಯದಿ ತಳಿರೊಡೆವಂದ
ಸ್ವರ ಮೂಡುವುವೀ ವಾದ್ಯಗಳಿಂದ.
ಕಟಿಯ ಮೇಲೆ ಭೃಂಗಿಯು ಕೈ ತಹನು
ಭೃಂಗಿರಿಟಿಯು ತಾಳವ ದನಿಸುವನು
ನನ್ನ ಮೃದಂಗದ ಮಾರ್ಜನೆಯೆನೆ ಧೋಂ
ತುಂಬುರು ವಿಧಿಯೊಡನೆಸುವನು ಹರ ಓಂ
ಹರ ಓಮೆನುವುದು ಮಾತೆಯ ಕೊರಲು
ಬಹು ವಾದ್ಯಸ್ವರ ಗುಂಫನಗೊಳಲು
ಹರ ಓಂ ಹರ ಓಂ ಹರಹರಹರ ಓಂ
ಶಂಕರ ಓಂ ಶುಭಕರ ಓಂ ಶಿವ ಓಂ
ತ್ರಿಪುರಹರ ಓಂ ವ್ಯೋಮಕೇಶೋಂ
ಚಂದ್ರಚೂಡೋಂ ಚೇತನೇಡ್ಯೋಂ
ಸ್ಮರಾಂತಕ ಅಂತಕಾಂತಕ ವಿಭೋ
ತಮೋಹಂತ ವಿಶ್ವಯಂತ ಶಂಭೋ !
    ಇಂತಾ ಕೈಲಾಸದ ಕದಿರಿಡುತಿರೆ
ಸಂಸ್ತುತಿ, ಭರ್ಗನ ಬಗೆ ಬಾಷ್ಪಕೆ ಬರೆ—
ವಿಚಲಿತನಾಗುತಲಾ ನುತಿಯಾಲಿಸಿ
ತನ್ನೊಳಕೋಚವ ಹೊರಮೊಗವಾಗಿಸಿ
ಕಂಡೆರೆವನಾಗ ಯೋಗಿನಾಂಪತಿ
ಅಪ್ಪುದಾತನಿಗೆ ಸಂಸ್ಕೃತಿಸ್ಮೃತಿ.
ಎಡದ ಗಿರಿಜೆ ಹೊರನಿಂತುದನರಿವಂ
ಅದು ತಾನೆನ್ನುವ ಭೇದವನರಿವಂ
ನುತಿಯಾಹುತಿಯಿಂದುಜ್ಜ್ವಲಿಸುವನು
ಚಾಯಾಸ್ಮಿತದಿಂ ಪ್ರಜ್ಜ್ವಲಿಸುವನು.
ಹರಿಯ ಮುರಳಿ ಸರಸತಿಯ ವಿಪಂಚಿ
ಮೃದಂಗ ಝಲ್ಲರಿ ತಾಳ ಪಳಂಚಿ
ಅರಿವಿನ ತುದಿಯೊಳಗಾಡುವ ಭವದ
ರಸವಂ ತರುತಿರಲೆದೆಗೆ ವಿಧ ವಿಧ

ಬಹುನದಿ ನೆರೆಯುವ ಕಡಲಂತಿರುವಂ
ನಾಟ್ಯೋನ್ಮಾದಕೆ ಎಡೆಗೊಡುತಿರುವಂ
ಮಹಾಮಾಯೆ ನರ್ತಿಸುತಿರೆ ಮುಂದೆ
ನಿಟ್ಟಿಸುತಿರುವಂ ಬಲುಬೆರಗಿಂದೆ.
ಹಿನ್ನೆಲೆಯಾಗಿರೆ ವಾದ್ಯೋದ್ಗೀಥಂ
ಮನಮಂ ಬಾಜಿಸೆ ಗೌರೀನೃತ್ತಂ
ಸುಭ್ರೂಭಂಗದಿಸಂಗಚಲನದಿಂ
ಮೃಷಾರೋಷದಿಂ ಮಂದಹಾಸದಿಂ
ಬಾ ಬಾ ಒಡನಾಡೆನ್ನುವ ಸನ್ನೆಗೆ
ಅಸ್ತು ಎನ್ನುತಾ ಹಿಮಾದ್ರಿಕನ್ನೆಗೆ
ಮಾನುಟರಾಜಂ ಪೀಠವನುಳಿವಂ
ನಾಗಾಜಿನ ನೇಪಥ್ಯವ ಕೊಳುವಂ
ತನುಕಟಿಕಂಕಣಕಪರ್ದಾಹಿಗಳ್
ಹೆಡೆಯಿಡುವೊಲು ನಡೆವನು ಮೃಡನೀಗಳ್
ಬರುವನು ಭೀಮಂ ರಂಗಸ್ಥಲಕೆ
ಧ್ಯಾನಸ್ಥಲದಿಂ ವಿಷಯಸ್ಥಲಕೆ
ಕರಣಾತೀತಂ ಗೋಚರನಾಗಿ
ಸ್ಥಾಣು ಸುಸ್ಥಿರಂ ಸಂಚಲನಾಗಿ
ಭವಪ್ರಸ್ಪಂದಕಿದಂತಃಸ್ಪಂದಂ
ಇದು ನಡೆವಂತದು ಇದು ಸ್ವಚ್ಛಂದಂ
ಎನಲೀ ಗತಿಛಂದವನನುಸರಿಸಿ
ಮೇಳಂ ಮೊಳಗಿಡೆ, ಅಮರರ್ ವೆರಸಿ
ಬೆಳೆವುದು ಶಂಕರಲಲಿತಾಲಾಸ್ಯಂ
ಸೌಂದರಾಗಮುಂ ಸಕಲೋಪಾಸ್ಯಂ
ಹುವಾಣೀ ಬಾಜನೆಗನುಕೂಲಂ
ದಾಂಗುಡಿಯಿಡುವೊಲು ಮಾಯಾಜಾಲಂ
ಕರಿಮುಗಿಲೊಳು ಸೆಳೆಮಿಂಚುಗಳಂತೆ
ಝುತುಝುತು ಸಂಧ್ಯಾರಾಗಗಳಂತೆ
ಸಂಯಮಿಗಳ ಸಂಮೋದಗಳಂತೆ
ಶಕ್ತರ ಕರುಣಾರೀತಿಗಳಂತೆ

ನಲ್ಲರು ತೋರುವ ಪ್ರೀತಿಗಳಂತೆ
ಭಾವುಕ ಜನಗಳ ಭಾವಗಳಂತೆ
ಜವ್ವನದುಲ್ಲಸದಾಟಗಳಂತೆ
ಹೊಮ್ಮನ ಬಾಳ್ವೆಯ ಬಿನದಗಳಂತೆ
ಬಳೆವುದು ಮಾತಾಪಿತರೀಲಾಸ್ಯಂ
ನಲವಿಂ ಪೊರೆಯೇರಲು ಚತುರಾಸ್ಯಂ
ಋಷಿ ಎನಿಪಸನಾತನಿದಂ ಕಂಡವಂ.
ಬಳಿಕ ಬಳೆವುದಾ ರುದ್ರತಾಂಡವಂ.
ಎಲ್ಲರ ಬಗೆಯನು ಮೀರುವ ಬಗೆಗೆ
ಶಿವನಿರವೇರುವುದೊಮ್ಮೆಗೊಮ್ಮೆಗೆ
ಡಮರುಗವಾಡಿಸುವಂ ನಟರಾಜಂ
ಮನಮೆಂಬೀ ತಿಮಿರಕೆ ರವಿತೇಜಂ
ಸೃಷ್ಟಿಸ್ಥಿತಿಸಂಹಾರಗಳೋಜಂ
ದೂರದ ಗುಡುಗೆನೆ ನಿಮಗಿದು ಸಾಜಂ
ಇದೆ ಭವನಾಟ್ಯೋನ್ಮಾದದ ತಾನಂ
ಡಮ ಡಮ ಡಮ ಡಮ ಶಬ್ದವಿತಾನಂ.
ಸರಸತಿ ವೀಣಾಝುಂಕೃತಿ ಮರಸಿ
ಬ್ರಹ್ಮನ ಶ್ರುತಿಘೋಷವ ಸಂವರಿಸಿ
ಹರಿಮುರಲೀನಾದವನಾವರಿಸಿ
ಸಂತರ ಸಂಸ್ತುತಿಗಳನೊತ್ತರಿಸಿ
ಹಬ್ಬುವುದೀ ದನಿ ಡಮರುವಿನಿಂದ
ಶಬ್ದಪ್ರಲಯದ ಶಬ್ದದ ಚಂದ.
ವಾಗರ್ಥಂ ನಿರ್ದ್ವಂದ್ವಮಾಯೆಡೆ
ಋತವಂತರ್ಹಿತಮಪ್ಪುದೀಯೆಡೆ.
ಪಸರಿಸಲಿಂತೀ ಡಮರುಗನಾದಂ
ಹರನಾಟ್ಯಪದಾಹತಿ ಸಂವಾದಂ
ಗಣ ಬಾಜಿಸೆ ಡಿಂಡಿಮದನುವಾದಂ
ಭರ್ಗನಿಗಪ್ಪುದು ತಾಂಡವಮೋದಂ.
ಮರುಳ್ಗಳ ಪಡೆ ಹರೆ ಡವ್ವುಡೆಗಳೆತ್ತಿ
ಮುಂದೆ ಬಹವು ಶಿವಶಿವೆಯರ ಸುತ್ತಿ

ಢಮಕು ಢಮಂ ಢಮಕುಢಮಂ ಟ್ರೊಳಢಂ
ಬಿರಿವುದು ಬಿರುದನಿಗಾ ಬ್ರಹ್ಮಾಂಡಂ
ಬಣ್ಣಿಪೆನೆಂತಾ ಭವ್ಯನಾಟ್ಯವಂ
ಭದ್ರಕಾಳಿ ಶಿವರುದ್ರನಾಟ್ಯವಂ !
ಅಂಗವೊಂದೆ ಛಂದವೊಂದೆ ಎನಲು
ತಿರ್ರನೆ ತಿರುಗುವರುನ್ಮಾದದೊಳು.
ಕರಣವಿಷಯಸಂಘರ್ಷಣವಿದುವೋ
ಈ ಘರ್ಷಣ ತಹ ಉನ್ಮಾದವಿದುವೋ
ಈ ಸಂಭ್ರಮ ಸಚ್ಚಿದಾನಂದವೋ
ಈ ರೀತಿ ಪರಂಜ್ಯೋತಿಯಂದವೋ
ಪರಂಜ್ಯೋತಿಯಿಂ ತಿಮಿರಂ ಬಂದುದೊ
ಇದರೊಳು ತೂರುತ ತೇಜಂ ಕಂಡುದೊ
ಈ ತೇಜಂ ಕೆಡೆ ಜಡಂ ತೋರಿತೋ
ಈ ಜಡವೊಡೆಯುತ ಪ್ರಾಣಂ ತೂರಿತೊ
ಪ್ರಾಣವ ತುಳಿಯುತ ಮನಂ ಮೂಡಿತೋ
ಮನವಂ ಹಿಂಚಿಸಿ ಜ್ಞಾನಂ ಕೂಡಿತೊ
ಜ್ಞಾನವನೇ ವಂಚಿಸಿ ಮರಳಿ ಜಡಂ
ಮೇಲ್ವರಿಯುತ ಬಂದಿತೊ ದಢಂ ದಢಂ !
    ಇಂತಾ ಮಾಕಾಳಿಯು ಕುಣಿಯುತ್ತಿರೆ
ಅಡಿಗಡಿಗೂ ಭದ್ರನ ಸೆಣಸುತ್ತಿರೆ.
ಇರ್ವರು ಗೆಲ್ಲದೆ ಸೋಲದವೋಲು
ಒಬ್ಬರನೊಬ್ಬರು ಸ್ಪರ್ಧಿಸುತಿರಲು
ವರ್ಧಿಸುವುದು ಹರನಾಟ್ಯೋನ್ಮಾದಂ
ವರ್ಧಿಸುವುದು ಡಮರುಗ ಸನ್ನಾದಂ
ನಾಮರೂಪದಿಕ್ಕಾಲವಳಿವೊಲು
ಮಹಾನಾಟ್ಯವಂ ಕುಣಿವುದು ಕಾಲು
ಮುಡಿ ಬಿಡುವುದು ಗಂಗಾಪ್ರಲಯಜಲಂ
ಜಡೆ ಹರಡಲು ಕೆಡುವುದು ವ್ಯೋಮತಲಂ
ಎತ್ತಲೆತ್ತಲೋ ಕಿತ್ತಸಲಂತೆ
ತೇಲಿಪೋಪನಹ ಚಂದ್ರಮನಿಂತೆ

ಈಗಳಿಲ್ಲ ಇಲ್ಲ ರವಿಹೊಳಹು
ಈಗಳೊಂದೆ ಒಂದೆ ನಗೆಹೊಳಹು
ಶಿವನಟ್ಟಹಾಸಧವಳಪ್ರಕಾಶ
ವಿಷಮಲೋಚನದ ವಿಲಯಪ್ರಕಾಶ.
ಈ ಬೆಳಕಿಗೆ ಈಗಳೊಂದೆ ತಿಮಿರ
ಹುಂಕಾರದಿ ತುಳುಕುವ ಗಳದ ಗರ
ಈ ಗರತಮದೊಳೆ ನಿರ್ಲಯವೆಲ್ಲ
ಸಕಲಚರಾಚರ ಸಂಸೃತಿಯೆಲ್ಲ
ನಿಟಿಲನಯನದಸಮತೇಜದೊಳಗೆ
ಹರಿವಿರಂಚಿಸುರಸಂತರು ಕರಗೆ
ಒಂದನೊಂದು ಸಮತೂಗಿಸುವಂದಂ
ನಿರುಕಿಸಿ ಕುಣಿವಂ ಜ್ಞಾನಾನಂದಂ
ಸುಂದರವದನದಿ ಮಹದಾನಂದಂ
ತೋರುತಲಿಹುದೈ ಪರಮಾನಂದಂ
ಇದೆ ಆ ತಮತೇಜಗಳಾಧಾರಂ
ರುದ್ರನ ಭದ್ರಸ್ಮಿತರುಚಿಪೂರಂ
ಕಾಳಿ ಬೆರೆವಳೀ ಮೂರು ತೆರದೊಳೂ
ಗರಳ ತಿಮಿರದೊಳು ನೊಸಲ ತೇಜದೊಳು
ಇವನಾಧರಿಸುವ ದಿವ್ಯಸ್ಮಿತದೊಳು
ತ್ರಿಗುಣಾತ್ಮಕೆ ತ್ರಿಗುಣಸ್ಥಾಯಿಯೊಳು
ಇದುವೇ ಶಿವಮದ್ವೈತಂ ಶಾಂತಂ
ಇದನರಿವರಿವಪ್ಪುದು ಸಂಭ್ರಾಂತಂ !
ನಮಶ್ಶಂಕರ ತಾಂಡವೇಶ್ವರ ಭೋ
ನಮಶ್ಶಿವ ಶಿವ ಸುಂದರೇಶ್ವರ ಭೋ
ಅಷ್ಟಮೂರ್ತಿಗಳೆತ್ತಿ ಕುಣಿವನೆ ಭೋ
ಸಕಲಸೃಷ್ಟಿಯನೊತ್ತಿ ಕುಣಿವನೆ ಭೋ
ನಮೋ ವಿಷಧರ ವಿಷಮನಯನ ವಿಭೋ
ನಮಶ್ಚಿನ್ಮಯ ಸದಾನಂದ ಪ್ರಭೋ
ಎಲ್ಲ ಕರಗುವ ಪರಮಸಮ್ಮುದವೇ
ಎಲ್ಲ ರುಚಿಗಳ ಕೊಳ್ವ ರಸಪದವೇ

ಭಾನುಬುದ್ಬುದ ತೇಜದಾಗರವೇ
ಶ್ರುತಿಯೆ ದೆಸೆಗೆಡೆ ಜ್ಞಾನಸಾಗರವೇ
ಎಲ್ಲರಹಮನು ಹೀರುವನೆ ಹರನೇ
ಎಲ್ಲರಿರವನು ಮೀರುವನೆ ಪರನೇ
ಭೋ ಮಹಾನಾಟ್ಯಾಟ್ಟಹಾಸನೆ ಓಂ
ಲೀನಜಾಯಾಮಂದಹಾಸನೆ ಓಂ
ಏಕಮೇವಾದ್ವಿತೀಯಾ ವಂದೇ
ಶರಣು ಕರುಣಿಸು ಕರುಣಿಸೈ ತಂದೆ.''

೬

ಇಂತಾ ತಾಂಡವವಂ ಪರಿಭಾವಿಸಿ
ತಾದಾತ್ಮ್ಯದೊಳಾ ನಟನಂ ಜಾನಿಸಿ
ಹರಕುಮಾರನಾನಂದದ ಯೋಗದಿ
ಕಣ್ಮುಚ್ಚಿರಲಾ ಧ್ಯಾನದ ಭೋಗದಿ,
ಆ ಮಹೋತ್ಸವದ ಮಹದನುಭೂತಿಯ
ಪಡೆಯಲು ನಾನೀ ದಿವ್ಯವಿಭೂತಿಯ
ನಿರುಕಿಸುತಿರೆ ನೆರೆಯರ್ತಿ ಭಕ್ತಿಯಿಂ
ಜಾನಿಸುತ್ತಲಾ ಪರಮಶಕ್ತಿಯಂ
ಆ ಮಹಾನಾಟ್ಯದೇರಂ ತೀರಂ
ಆ ನಲ್ಮೆಯ ಮುನ್ನೀರಿನ ಮೀರಂ
ಭಾವಿಸಿ ಬಾಹ್ಯಸ್ಪರ್ಶವಿಮುಕ್ತಂ
ದಿವ್ಯಾದ್ಭುತ ಸದ್ದರ್ಶನಯುಕ್ತಂ
ನಾನಾಗಿರೆ, ಬಗೆ ಕೊಚ್ಚಿ ಹೋಗಿರೆ
ದುಸ್ತರವಾಗಿರೆ ಈ ದಡಕೆ ಬರೆ,
ಗಣೇಶದೇವನ ತಾರಕಸ್ಮಿತವ
ನೆಮ್ಮಲು ಬಯಸುತಲಾತ್ಮದ ಹಿತವ
ಕಂದೆರೆಯಲು, ಕಣ್‌ಮರೆಯಾಗಿರ್ದಂ
ಬಂದಂತೆಯೆ ಮಾಯೆಗೆ ಸಂದಿರ್ದಂ
ಎನಗೀ ಕಣಸಿನ ಸಲ್ವರವಿತ್ತು
ವೆಗ್ಗಳಿಸಿರೆ ಭಾವದ ಸಂಪತ್ತು
ಓಂ ಶಿವಮಸ್ತು.

# ಚಿಕುಹೂ

ಚಿಕುಹೂ ಚಿಕುಹೂ ಚಿಕುಹೂ—
ಸನ್ನೆಯವೊಲು ಮುಹುರ್ಮುಹು
ಆರೆಚ್ಚರಕೀ ತುತ್ತುರಿ
ಬಾನೊಳು ಮೊಳಗುತಿದೆ?
ಎನ್ನ ಕಿವಿಯೊಳೀ ಸವಿದನಿ
ಸಿಂಪಿಸುತಿದೆ ಸೊದೆಸೀರ್ಪನಿ
ವಿಸ್ಮೃತಿಗೈದಿರುವಾತ್ಮವ-
ನುಜ್ಜೀವಿಪ ತೆರದೆ.

ದಿವಮರೆತಪ್ಪರೆ ಎಚ್ಚರೆ
ಅಗಲುವಳೆಂದಿಳೆ ಬೆಚ್ಚರೆ
ಹರಿಕಾರರನಮರಾವತಿ
ದೊರೆಯಟ್ಟಿಹನೆನಲು
ಈ ದನಿ ಬರೆ ಲಾಲಿಸುತೆದೆ
ಪಯಣಕೆ ಸಡಗರಗೊಳುತಿದೆ
ಮನ್ಮಾನಸ ಸರೋವರದ
ಕರಣಗಳಂಚಿನೊಳು.

ಚಿಕುವೂ ಚಿಕುವೂ ಚಿಕುವೂ—
ಕಂಪೆರಚಿದೆ ಈ ದನಿಹೂ
ರಸ ಸೂಸಿದೆ ಸ್ವಾಹಾ
ಎಂದುಜ್ವಲಿಸಲು ನೆನಹು
ನೋಡುತಲಿದ್ದರು ಕಾಣದು
ಆಲಿಸುತಿದ್ದರು ಕೇಳದು
ಸರ್ವೇಂದ್ರಿಯವಿದಕಾಗಿರೆ
ಪ್ರತ್ಯಕ್ಷವೆ ಮರಹು.

"ಬಂದಿರ ತಂದಿರ ಕೊಡುವಿರ
ಕೊಟ್ಟಿರ ಕೊಳುವಿರ ನಡೆವಿರ"—

ನಿಸ್ಸ್ನೇಹದ ಸಭ್ಯತೆಯೊಳು
    ಈ ನಡೆವಳಿಯೆಲ್ಲಾ
ನಡೆಯುತ್ತಿವೆ ಹೊರಬಗೆಯೊಳು,
ಮನೆಯಾಚೆಯ ಗದ್ದಲದೊಲು ;
ಯೋಗಕ್ಷೇಮದ ವೇದನೆ
    ಇಂದೆನಗಿನಿತಿಲ್ಲ.

ಭವಿ ನಾ ತಾಪಸಿ ನಾನು
ಕವಿ ನಾ ಕಿಂಕರ ನಾನು
ನಾ ನಾ ಇದಕಿತಿಯೇನಿದೆ
    ಮಿತಿಯೇನಿದೆ, ದನಿಯೇ,
ಥಟ್ಟನೆರಗಿ ಗರುಡನ ತೆರ
ಅಹಮೆಂಬೀ ನಿಧಿನಾಗರ-
ನೊಯ್ದಿಹೆನೀ ಮುದವಿದ್ಯುತ್-
    ಸ್ಪರ್ಶವ ಮನ ಪಡೆಯೆ.

ಚಿಕುವೂ ಕುವ್ವೂ—ಏನ್ ಸವಿ !
ಒಂದೇ ಸರದೊಂದೇ ಛವಿ
ಅಜರಾಮರವಿದು ಅಚ್ಚರಿ
    ಪುರಾಣ ನೂತನವು
ಕೋಟಿ ಕೋಟಿ ಕೋಗಿಲೆ ಮೈ
ತರಗೆಲೆಯಂತುದುರಿವೆ ಸೈ
ಇದನು ಹಿಡಿದು ಬಿಡುವಾಟದಿ
    ಋತುಋತು ಯುಗಯುಗವೂ.

ಈಯೆಡೆ ಆಯೆಡೆ ಬೇರೆಡೆ
ಬಿಡುವಿರುವೆಡೆ ಬಿಡುವಿರದೆಡೆ
ಒಲಿವೆಡೆ ನಲಿವೆಡೆ ಅಳುವೆಡೆ
    ದೇಶವಿದೇಶದೊಳು
ಜನ್ಮದಿ ಜನ್ಮದಿ ನಾನಿದ
ಬಗೆಬಗೆಯೊಳು ಕೇಳಿದ ಹದ

ಇಂದೆಂತೆಯೊ ತೆರೆ ತೆರೆಯುತ
ತೋರಿದೆ ಹೃದಯದೊಳು.

“ಓ ಕೆಳೆಯಾ, ಮನೆ ನೆನೆಯಾ
ಬಿಡುಬಿಡು ಭವದೀ ಕೊನೆಯಾ
ದಿವ್ಯತೆಗೆಯೆ ಕಾಮಂಗೊಂ-
ಡೆದೆ ಎರಕೆಯನೆರೆಯಾ”
ಎಂಬರ್ತಿಯ ಆರ್ತಸ್ವರ-
ವಿದು ಬಗೆಗೊಳೆ, ನಾ ಕಾತರ-
ಗೊಂಡೋಗುಟ್ಟುವೆ ನೆನೆನೆನೆ-
ದಾ ದೂರದ ಕರೆಯಾ.

ಚಿಕುವೂ ಕುವು ಕುವು ಟಿಇವೂ—
ಕಾರ ತಂಪು ಮಿಂಚ ಹೊಳಹು
ದಾಳಿಂಬೆಯ ರುಚಿ ಅಗಲಿದ
ಕಾದಲರೆದೆ ಕಾವು,
ಮಗು ತಾಯಿಗೆ, ಕವಿ ಚೆಲುವಿಗೆ,
ನನ್ನಿಗ ನನ್ನಿಗೆ, ಪರಮಗೆ
ಭಕ್ತರು ಹಂಬಲಿಸುವ ಬಗೆ
ಈ ಕೋಗಿಲೆಯುಲಿವು.

ದನಿಹಣ್ಣಿಂದಮೃತದ ರಸ
ತೊಟ್ಟಿಡಲಿಂತೆದೆ ತಾಮಸ-
ವುಳಿದುಜ್ವಲಿಸಿರೆ ಈ ಮಹ-
ದನುಭವಕೇನೆಂಬೆ ?
ಈ ಶಾಶ್ವತ ರುತಿಗೊಂದಿದ
ಅಂದಂದಿನ ಸ್ಮೃತಿಯೋಲಿದ
ಪಿಡಿವಾನಂದದೊಳಾನಂ-
ತ್ಯವ ಮುಟ್ಟಿಹೆನೆಂಬೆ.

# ಜೀರುಂಡೆಯ ಮೇಳ

ಕದ್ದಿಂಗಳಿನಿರುಳು :
ಬುವಿ ಬಾನಂತರವೆಲ್ಲವ ಕತ್ತಲು ತುಂಬಿರಲು,
ದೆಸೆಯಳಿಯದೆ ನಿಲಲು
ತಮಕಿವು ಸೇತುವೊ ಎನೆ ದಟ್ಟೈಸಿರೆ ತಾರೆಗಳು,
ಭೂತ ಭವಿಷ್ಯವನು
ಮುಸುಕಿನೊಳವಿತಿಟ್ಟಂತಿಳೆ ಹೊದೆದಿರೆ ಮೌನವನು,
ಸೆರೆಬಿದ್ದಿಹ ಕಾಲ
ಹುಯಿಲಿಡುವುದೊ ಎನೆ ಜಿರ್ರನೆ ಜೀರುಂಡೆಯ ಮೇಳ!

# ತಮೋಭೀತಿ

ತವಸಿ ಶಿವ ಪಾರ್ವತಿಯ ನಸು ನೋಡುತಿವೆ ಮುಚ್ಚಿ-
ದಂದದೊಳು ಸಂಜೆಯಚ್ಚರಿ ಹೊನ್ನ ಬೆಳಕು
ಮಲೆ ಕಣಿವೆ ಬನ ಸರಸಿಯೆಲ್ಲವೂ ತೇಜಗೊಳೆ
ತುಸಕಾಲ ಬೆಳಗುತಳಿಯಿತು, ಆಯ್ತು ನಸುಕು.

ಕತ್ತಲೆಲ್ಲೆಡೆ ಈಗ—ಇದಿರುಮಲೆ ಕರಗಿತಿಗೊ
ಬಾನಿನೊಳು ಕದಡಿತಿಗೊ—ಬರಿ ಧೂಳುಗುಪ್ಪೆ ;
ಇರುಳ ಹಾವಸೆಯಂತೆ ರೂವಳಿದು ತೇಲುತಿವೆ
ಕೆರೆಯ ಕರೆ ಮಾವು ನೇರಿಳೆ ಹೊಂಗೆ ಹಿಪ್ಪೆ.

ಜಗ ಮೆಲ್ಲನಳಿಯುತಿದೆ, ಮುಗಿಲ ಮರೆಯೊಳಗಾರೊ
ನಗುವ ತೆರವಾಯ್ತು ತಾರೆಗಳಟ್ಟಹಾಸ,
ಜೀವಕ್ಕೆ ಬಯಲಾಸೆ ತೀರಿದುದು, ಜನವಿಡುವ
ದೀಪದಿಂ ದೇಶಕ್ಕೆ ಕಿಂಚಿದವಕಾಶ.

ಕಮಲಕೊಕ್ಕರೆಯಿಂದ ಚೆಂದವಿದು, ಬಳಿಕೆಯಿಂ-
ದೆನಗಿನಿದು ಈ ಸರಸಿ—ಎಂತಾಗುತಿಹುದು !
ಬೂತವಾಡಿಸುತಿರುವ ರಾಜಕುವರಿಯ ತೆರದಿ
ನೀರ ಜಡೆ ಬಿಚ್ಚಿ ಹರಡಿರೆ ಭೀತಿಯಹುದು !

ಬೆಟ್ಟ ಕೆರೆ ಬನ ಬಾನು ಬಯಲೆಲ್ಲವೊಂದೀಗ,
ನನಗಿವಕು ಮುದದ ಬೇಹರ ತೀರಿತೀಗ.
ಸುತ್ತ ನೋಡೆನ್ನೆದೆಗು ದಾಳಿಯಿಡೆ ಸಾರುವೀ
ತಮಕೆ ನಾನೆದೆಗೆಟ್ಟು ಕಾಲ್ತೆಗೆವೆ ಬೇಗ !

# ಸಂಜೆಗಾಳಿಗೆ ಜಳಕ ಮಾಡಿಸೆ

ಸಂಜೆಗಾಳಿಗೆ ಜಳಕ ಮಾಡಿಸೆ
ಹನಿತು ಮಳೆ ಹೊಳೆಯೋಡಿತು
ಬಾರ್ ಬೆಸಲೆ ಶಶಿ ನೋಡಿ ನಗುತಿರೆ
ತಿರೆಗೆ ತಂಗದಿರಾಯಿತು.

ಮುಗಿಲ ರೆಂಬೆಯ ಮೇಲೆ ಮಿಂಚಿನ
ಹಕ್ಕಿ ರೆಕ್ಕೆಯ ಕೆದರುತ
ಹವಣಿಸಿದೆ ಉಡ್ಡೀನ ಲೀಲೆಗೆ
ಚಂದ್ರಲೋಕವ ಬಯಸುತ.

ಕಪ್ಪೆ ಜೀರುಂಡೆಗಳು ಮೇಳದಿ
ಜಪಿಸುತಿವೆ ಬಲ್ ಮಂತ್ರವ
ಆದರ ಮಹಿಮೆಯೊ ಎನ್ನೆ ತೋರುತ
ಸುತ್ತ ದೃಶ್ಯದ ತಂತ್ರವ.

ಓರೆಯಾದೀ ಸೊದೆಯ ಬೋಗುಣಿ
ಸುರಿಯುತಿಹ ಬೆಳುದಿಂಗಳ
ಕುಡಿದು ಮದವೇರಿಹುದೊ ಪುರವೆನೆ
ದೀಪವೆಸೆದಿವೆ ಚಂಚಲ.

ವಿಶ್ವಮೋಹನನುಸಿರು ಮಿಡಿದೆ-
ನ್ನ ಹಂಗೋಳದ ಬುದ್ಬುದ
ಚಿತ್ರದಂಚಿನೊಳವನ ಮಾಯೆಯು
ಮೆರಸುತಿದೆ ಬಹು ವಿಧ ವಿಧ.

# ಇಗೊ ಸಂಜೆ, ಸಖಿ

ಇಗೊ ಸಂಜೆ, ಸಖಿ,
ಚೆಂಬೊಗರಿಂ ರಂಗೇರಿಹ ಜಲದಾಬ್ಜಮುಖಿ
ತುಸ ತುಟಿತೆರೆದು
ಶಿಶುಚಂದ್ರನ ನಗೆ ನಗುವಳು ಸ್ವಾಗತವೊರೆದು ;
ನಿನ್ನ ಸಿರ್ ಕಂಪ
ಕೊಳ್ಳಲು ಎಲರ್ ತರುತಿಹನೀ ಬನದಲರಿಂಪ ;
ಓ ಚಪಲಾಕ್ಷಿ,
ಎನ್ನೆದೆಯಾಗಸದೊಳು ಬಿಡು ಅಕ್ಷಿಯ ಪಕ್ಷಿ.
(ಇಗೊ ಸಂಜೆ, ಸಖಿ, . .)

ಆವಲು ಹೂವ
ಮುಟ್ಟಲು ಓಡುವ ತೆರೆಗಳ ನಿಟ್ಟಿಸುತಿರುವ,
ಬಾನಿಗೆ ಬೆಳೆವ
ಹಕ್ಕಿಯ ಪಟ್ಟಣವಾಗಿಹ ತರುಗಳಿಗೊಲಿವ,
ನನ್ನನೆ ಮರೆವ
ಬೇರೆಲ್ಲೆಡೆ ಬಲು ಬೆರಗಿನ ಭಾವವನಿಡುವ
ಕೊಂಕೇತಕೆಯೆ ?
ಸಂಗಮದೊಳೆ ವಿರಹವ ತರುವೀ ಬಗೆ ಸರಿಯೆ !
(ಇಗೊ ಸಂಜೆ, ಸಖಿ. . .)

ಮೋಹದ ಮನಕೆ
ಪ್ರೇಮದ ಕಿಡಿ ಹೊತ್ತಿದವೊಲು, ಪ್ರಿಯೆ, ಈ ತಮಕೆ
ತಾರಗೆಯಾಯ್ತು ;
ವಿರಾಗಿ ಬೈಗಿನ ಹೃದಯದಿ ವಿಷಾದ ಹೋಯ್ತು ;
ನಾ ಬೈರಾಗಿ,
ಇನ್ನೆಲ್ಲಿಯು ರುಚಿ ಕಾಣದೆ ತವಿಸುತ್ತಿಹ ಯೋಗಿ ;
ಓ ಎನ್ನೊಲವೇ,
ಒಳವೊಗೆವಾಸೆಗೆ ಕಡೆಕಣ್ ಕಿಡಿ ಎಂದಿಡುವೆ ?
(ಇಗೊ ಸಂಜೆ, ಸಖಿ . . .)

# ಮೂಡುತಿಹನದೊ

ಬಾನ ಬಣ್ಣ ಮಾಗಿಸಿ ಶಶಿ
ಮೂಡುತಿಹನದೋ.

ಸಂಜೆ ಹೂವನೆರಚಿ ಸಾರೆ
ನಮ್ರವಾಗಿ ತಾರೆ ತೋರೆ
ಶರದದಿರುಳ ಕರವ ಪಿಡಿದು
ಏರುತಿಹನದೋ.

ಉದ್ಯಾನದ ಪುಷ್ಪಬೃಂದ
ಲಜ್ಜೆಯ ಸಿರಿ ಹೊಂದಿದಂದ
ತೆಳು ಬೆಳಕಿನ ಮೇಲುದುವನು
ಧರಿಸುವಂತಿದೋ.

ತಮವನುಳಿದುವೆನುವ ತೆರದಿ
ನಿಡಿದು ನೆಳಲ ಬಿಸುಟು ನೆಲದಿ
ತರುಗಳೆದ್ದು ಬೇರೆ ತೆರವ
ತೋರುವಂತಿದೋ.

ನೆಳಲು ಬೆಳಕಿನೆಂಥ ಆಟ
ನನಸೆ ಕನಸು ಎನಿಪ ಮಾಟ
ಎಲ್ಲು ಬಿಡುವು ಬೇಟವೆನುವ
ಚೆಂದವಾಯ್ತಿದೋ.

ಜಗದ ಬಣ್ಣ ಮಾಗಿಸಿ ಶಶಿ
ಏರುತಿಹನದೋ.

# ಇರುಳು-ಚಂದ್ರೋದಯ

ಬುವಿಯು ಚಾಪೆಯ ತೆರದಿ ಸುತ್ತಿ ಹೊತ್ತೊಯ್ವಂತೆ
ಕತ್ತಲೆಹಿರಣ್ಯಾಕ್ಷ ಮುತ್ತಿಬಹ ನಕ್ಷತ್ರ-
ಮೊತ್ತಮಂ ಧಿಕ್ಕರಿಸಿ ಬರುತಿಹನು ಗೆಲವಾಗಿ
ದಿವಕಶಾಂತಿಯ ತಂದು. ಹೊಸರಾಜ್ಯವಾಯ್ತಿಂದು.
ಇದರ ಸತ್ಯವೆ ಬೇರೆ, ಶಾಸನವೆ ಬೇರೆ. ರವಿ
ತೋರಿದಾ ಜಗದ ಮಾಯೆ ತೀರಿತು. ಹೊಸ ಮಾಯೆ
ತೋರಿತ್ತೈ—ಆ ಮಾಯೆಯನೆ ಮಗುಚಿ ಈ ದೈತ್ಯ
ಹೊದೆದನೋ ತನ್ನ ದೊರೆತನವ ಮೆರಸಲೋಸುಗ!
ಹಗಲೊಳೆಡೆಗೆಟ್ಟಾಸೆ ಭಯಕೆಲ್ಲ ಎಡೆಯಿಲ್ಲಿ,
ಅಲ್ಲಿ ಗೆಲವಾದುದಿಲ್ಲಿ ಜಡ. ಅಲ್ಲಿನ ಸನಸು
ಇಲ್ಲಿನ ಸ್ವಪ್ನ ; ನಿರಂತಮೀ ದೇವಾಸುರಂ,
ಜಗದಾಟ ಈ ಮಾಯೆ ಮಗುಚಿ ಹೊದೆವಾಟ—ಎನೆ
ಎಂತು ಮೈದೋರಿದಂ ಉಭಯರಿಗು ಶುಭವ ಕೋರಿ.
ಶಂಕರ ಸುಧಾಕರಂ ಮತ್ತೊಂದು ಮಾಯೆ ತೋರಿ.

# ಕಡಲಿದಿರು

ಗುಳಿಗೆ ಬಿದ್ದಾರುತಿಹ ಭೂತದಂತೊರಲುತಿದೆ
ನಿಡುಸುಯ್ಯುತೀ ಕಡಲು ತನ್ನ ಬಂಧಿಸುವರೆಯ
ದಡವನಲೆಪಂಜದಿಂ ಪರಚಿ—ಮೇಲೇರಿ ಬರ-
ಲೆಳಸಿ ನಿಮಿನಿಮಿರಿ ಬಿದ್ದೆದ್ದುರುಳಿ ಕೊನೆಗೆ ಈ
ಕರೆಗೆಯೇ ಕೈಚಾಚುತಿದೆ ನೆರವ ಕೋರುತ್ತ.
ದಿಟ ಮಹದ್ವ್ಯಕ್ತಿ ಈ ನೀರನಿಧಿ ; ಚಿರವಿದರ
ತಟದೆಲ್ಲೆಯುಪಮಾನದಾರ್ತನಿರ್ಘೋಷ. ಇದ
ಸೆರೆಯೊಳಿಟ್ಟಾಳ್ವರಾರ್ ?—ಯೋ ವೈ ಭೂಮಾ ತತ್
ಸುಖಮೆಂಬ ಋಷಿವಾಣಿ ಅನುಭೂತವಾಗುತಿರೆ
ದಣಿವಿಲ್ಲದಲೆಯುವೀ ಮುನ್ನೀರ ಹರಹ ನಾ
ಕನಿಕರಿಸಿ ನಿಂದಿಹೆನು ಆ ಮಹಾಶಕ್ತಿ ಸಂ-
ಮುಖದಿ ಅದರ ಋತವನು ಸೋಂಕಿ ಅಲ್ಪತೆ ನೀಗಿ—
ಕ್ಷುಬ್ಧ ಜಗದೊಳು ಕ್ಷಾಂತಿಯಾಂತಿರುವ ಯುಕ್ತನಂತೆ
ಹರಿಯ ನಿಲುವೊಳು ಭವಿಗೆ ಮರುಗುತಿಹ ಭಕ್ತನಂತೆ.

# ಲಘುವಾಗೆಲೆ ಮನ

ಲಘುವಾಗೆಲೆ ಮನ ಗೆಲವಾಗೆಲೆ ಮನ
ಹಾರು ನನ್ನ ಬಿಟ್ಟು
ಹಾರಿ ಹರಿಯ ಮುಟ್ಟು ‖ ಪ ‖

ನನಗಂಟಲು ನೀನಾಗುವೆ ಕಶ್ಮಲ
ನನ್ನ ತೊರೆಯೆ ನೀ ನಿರ್ಮಲ ನಿಷ್ಕಳ
ಹರಿಯೊ ನನ್ನ ಬಿಟ್ಟು
ಮುಂಬರಿದು ಹರಿಯ ಮುಟ್ಟು.

ನೀಲದಾಗಸದ ಹರಹೊಳು ಹಾರುತ
ಅಂಚೆಯಂತೆ ಮುಗಿಲಂಚನು ಸೇರುತ
ಕ್ಷೀರಾಬ್ಧಿಶಾಯಿ ಶ್ಯಾಮಸುಂದರನ
ಉಸಿರೊಳಾಡು ನೀನವನುಸಿರಾಗುತ

ಬೆಳಕಿಗೊಲಿದು ಬಿರಿದಲರಿನೆಲರು ಬರೆ
ಪೋಗು ಸಂಗಡಲೆ ನೀ ಮನವೆ
ಮುಗ್ಧರುಲಿವ ನಗೆಮಾತುಗಳಾಲಿಸಿ
ನಂದಗೋಕುಲವ ನೆನೆ ಮನವೆ.

ಗರಿ ಮುದುರಿಸುವಳಲಂಟನು ಕರಗಿಸೆ
ಶ್ಯಾಮನ ಮೈಬಣ್ಣದಿ ನೆನೆಯೊ
ಮಿಂದೇಳುತಲಾ ಪುಣ್ಯಕಾಳಿಮದಿ
ಚೆಲುಗಂಗಳ ತೇಜದಿ ಬೆರೆಯೋ.

•

ಲಘುವಾಗೆಲೆ ಮನ ಗೆಲವಾಗೆಲೆ ಮನ
ಹಾರು ನನ್ನ ಬಿಟ್ಟು
ಹಾರಿ ಹರಿಯ ಮುಟ್ಟು.

# ನಿರೀಶ್ವರನನ್ನು ಕುರಿತು

ಭವದುರ್ಗವಿಪಿನದೊಳು ಗಮ್ಯವರಿಯದೆ ತೊಳಲಿ
ಶ್ರಾಂತಿಯಿಂ ಭ್ರಾಂತಿಯಿಂ ಗತಿಗೆಟ್ಟು ಮತಿಗೆಟ್ಟು
ಮುಂತನರಿಯದೆ ನಿರಿಹಪರನಾಗಿ, ಅಂದಾರ್ತ
ಪ್ಲವಗವಾಹಿನಿ ವಿಂಧ್ಯಕಾನನದಿ ಬಳಿಗೆಟ್ಟು
ನಿರೀಹಮಾಗಿ ಋಕ್ಷಬಿಲಮುಖದಿ ನಿಂದವೊಲು,
ಧರ್ಮಗಹ್ವರ ಮುಖದಿ ಶಂಕಿಸುತ ನಿಂದಿರುವ
ಕರ್ಮಸಂದೇಹಿ, ಸಂಮೋಹಿತಾಂತಃಕರಣ,
ನಿರೀಶ್ವರನೆ, ಗವಿಯ ತಮಕಂಜಿ ಹಿಂಜರಿದು
ನಿಲಬೇಡ ; ನೋಡೈ : ರಸಕ್ಲಿನ್ನ ಹಂಸಸಂ-
ಸೇವಿತಂ, ಸುಮನಆಮೋದ ನಿಷ್ಯಂದಿ, ಮೇ-
ಘಾವಿಷ್ಟಹೃಷ್ಟ ನಭಸಂಗಮಾರಾವಮೀ
ಬಿಲಮುಖಂ ; ಇದರಂತರಾಳದೊಳಗಿರುವುದೈ
ನಿನ್ನ ತೃಷ್ಣೆಗಳೆಲ್ಲ ತಣಿವ ಜೀವನದ ನಚ್ಚು :
ನೆಚ್ಚಿ ಹೊಗು, ಕಾವಲಿಹ ಕಾವಳಕೆ ಕಣ್ಣು ಮುಚ್ಚು.

# ಸಹನೆ-ಶಿವ

ಕಡೆದ ಕಡಲಿನ ಮೊದಲ ಫಲದಂತೆ, ಕಡೆಗೊಗೆವ
ಸೊದೆಗೆ ಹಿರಿಯಣ್ಣನಂದದೊಳು ಭಾರತದ ಜನ-
ದುದಧಿಯೊಳಗಿಂದು ಮೂಡುತಿದೆ ಹಾಲಾಹಲಂ,
ನಡೆದೆಲ್ಲ ಪಾಪಗಳ ಕೋಲಾಹಲಂ, ಕರ್ಮ
ದಾವಾನಲಂ ; ನಿಷ್ಕೃತಿಯ ರೂಪಮಿದ ತಾಳಿ
ಬದುಕುವೆವೆ ಬದುಕುಂಟು, ಸಂಮೋದವುಂಟು, ಸಂ-
ಪದವುಂಟು ; ತಾಳೆವೇ ಸತ್ತೆವಾವೀ ವಿಷವ
ಭಾವಿಪರದಾರು, ಸೈರಿಪರಾರು ? ಮೊರೆಯಾರ್ಗೆ ?
ಮೃತ್ಯುಂಜಯಾ ನಮ್ಮ ಧೃತಿಗೈತರ್ಪೈ ಎಂದು,
ಮರುಳ್ಗಳೊಡೆಯನೆ ನಮ್ಮ ಸಹನೆಗಿಂಬಾಗೆಂದು,
ಗರವ ಕುಡಿದನೆ ನಮ್ಮ ಮೌನದೊಳು ನಿಲ್ಲೆಂದು,
ಸತ್ಯನೆ ಸದಾಶಿವನೆ ಕರುಣಿ, ಕರುಣಿಪುದೆಂದು—
ಅಣುಮಹತ್ತುಗಳಲ್ಲಿ ಪರಮ ಸಂಯಮವ ತೋರಿ
ಜಗವ ನಡೆಸುವ ಶಿವಕೆ ಮೊರೆಯಿಡುವ ಬಾರಿ ಬಾರಿ.

# ನೆರಳು

ಮೇಲೊಂದು ಗರುಡ ಹಾರುತಿಹುದು
ಕೆಳಗದರ ನೆರಳು ಓಡುತಿಹುದು
    ಅದಕೊ ಅದರಿಚ್ಛೆ ಹಾದಿ
    ಇದಕು ಹರಿದತ್ತ ಬೀದಿ.

ನೆಲನೆಲದಿ ಮನೆಯ ಮನೆಯ ಮೇಲೆ
ಕೊಳ ಬಾವಿ ಕಂಡು ಕಾಣದೋಲೆ
    ಗಿಡ ಗುಲ್ಮ ತೆವರು ತಿಟ್ಟು
    ಎನ್ನದಿದಕೊಂದೆ ನಿಟ್ಟು.

ಗಾಳಿ ಬೆರಗಿದರ ನೆಲದೊಳೋಟ!
ವೇಗಕಡ್ಡಬಹುದಾವ ಹೂಟ?
    ಸಿಕ್ಕುದಣಿವಿಲ್ಲದಂತೆ
    ನಡೆಯಿದಕೆ ನಿಲ್ಲದಂತೆ.

ಇದ ನೋಡಿ ನಾನು ನೆನೆವೆನಿಂದು—
ಇಂಥ ನೆಳಲೇನು ಗಾಂಧಿಯೆಂದು!
    ಹರಿದತ್ತ ಹರಿಯ ಚಿತ್ತ
    ಈ ಧೀರ ನಡೆವನತ್ತ.

# ಕವಿ ಬೇಂದ್ರೆಯವರನ್ನು ಕುರಿತು

ಕವೀಶ್ವರ, ಸುಹೃದ್ವರ, ನಿನ್ನ ಸಿರಿಗನ್ನಡದ
ಮಾತಿನೊಳು ಮೂಡುತಿಹ ಭವ್ಯಸುಂದರ ಕಾವ್ಯ-
ಕೋತು, ನುಡಿಯ ಬೆಡಗು ಹಾಡಿನ ಗುಂಗು ಊಹೆಯ
ಸರ್ವೋನ್ನತಿ ಭಾವನೆಯ ಉದಾರತೆ—ಇವಕೆ
ಮನಸೋತು ರಸಾರ್ದ್ರ ಸ್ವಾಂತದಿಂ ಭಾವಿಪೆನು :
ಆವ ಬೀಳಾಸೆಯಿಂದಾದಾವ ಶಾಪಕ್ಕೊ
ಆವ ದುಷ್ಕೃತಿಯ ನಿಷ್ಕೃತಿಗೊ, ನಮ್ಮ ತಾಯ್ನುಡಿ
ತನಗಾದ ನಾಡಿನೊಳೆ ತಾನಮಂಗಳೆಯೆನಿಸಿ
ಹಿರಿಮೆಯು ನೀಗಿ ಹೆಸರಳಿದು ರೂವಿಲಿಯಾಗಿ
ಬನ್ನ ಪಡುತಿರಲು, ತಪೋವಿಪಾಕಮೊದವಿತೆನೆ,
ತನ್ನತೆಯ ಜತೆಗೆ ದಿವ್ಯತೆಯನಳವಡಿಸಿ
ತಿರೆಗೆ ಸೋಜಿಗಮಾಕೆ ಎಂದು ಜನ ಬೆರಗಾಗೆ
ರೂಪವನಿತ್ತ ರಾಮನಾದೆಯೈ ದತ್ತರಾಮ,
ಗಾಳಿಗೂ ಬಾಳೀವ ರೂವಾರಿ, ಸಿದ್ಧಕಾಮ !

# ನನ್ನ ನಾಯಿ

ಹೆರರ ನೋವಿಗೆ ಅಯ್ಯೊ ಎಂದು
ಮರುಗಿ ಸುಯ್ಯಲನಿಡಲು ಒಲವೆ ?
ಹಿರಿಯ ಸುಖದಿರವೆನ್ನದೆನ್ನುವ
ಅರಿವು ಒಲಿದವಗಿರುವುದೆ ?

ಜನುಮದೊಂದಿಗೆ ಜೊತೆಯ ಕೂಡಿ
ಕೊನೆಯವರೆಗೂ ಬೆನ್ನ ಬಿಡದ
ಜನುಮದುನ್ನತಿ ಕುಲದ ಹೆಮ್ಮೆಯ .
ಕಟ್ಟ ಕಳೆವುದೆ ಕರುಣೆಯು ?

ಕೊಳದ ಕರೆ ಬಳಿ ಅಂದು ಮರುಗಿದೆ
ಸುಳಿದ ನೋವಿನ ಅಳುವ ಕೇಳಿ,
ಬೆಳೆದ ಇರುಳೊಳು ದನಿಯನರಸಿ
ಮನದೊಳಳುಕುತ ನಡೆದೆನು.

ಮುಗಿಲ ಬೆಳ್ಳಿಯ ಪೊರೆಯ ಹೊದೆದು
ಸೊಗಸುಕನಸನು ಕಾಣುವಂದದಿ
ನಗುವ ಚಂದ್ರನ ಬೆಳಕಿನೊಳಗೆ
ಕಂಡೆ ತಬ್ಬಲಿ ಮರಿಯನು.

ತಾಯಿ ಸತ್ತರು ಮೊಲೆಯ ಬಿಡದಾ
ನಾಯ ಮರಿಯ ಗೋಳ ಕಂಡೂ
ಮೈಯ ಮುಟ್ಟಲು ತಡೆದುದಂದು
ಜಾತಿ ಹೆಚ್ಚಿನ ಹೆಮ್ಮೆಯು.

ಕೊರೆವ ಚಳಿಯೊಳು ದಿಕ್ಕುಗಾಣದ
ಮರಿಯ ತೊರೆಯಲು ಮನವು ಒಪುದೇ !
ಕೊರಲೊಳಿಟ್ಟೆನು ಬಳ್ಳಿಕುಣಿಕೆಯ
ಮನೆಗೆ ನಡೆಸಿದೆ ಮೆಲ್ಲನೆ.

ಅಂದು ಮಕ್ಕಳ ಹರುಷ ಮೀರಿತು
ಮುಂದೆ ಕುಣಿದರು ಕೈಯ ತಟ್ಟಿ
ಕಂದನಂದದಿ ಅಂದು ಮೊದಲು
ಮರಿಯ ಸಾಕಿದೆವೆಲ್ಲರು.

ಹಾಲು ಅನ್ನವನುಣಿಸಿ ನಲಿದೆವು
ಮೇಲುತಿಂಡಿಗಳೆಲ್ಲವಿತ್ತೆವು
ಮೈಲಿಗೆಯ ಭಯದಿಂದ ಮೈಯನು
ಮುಟ್ಟಗೊಡಿಸೆವು ಆದರೂ.

ಮರಿಯು ನಮ್ಮ ಬಿಂಕವರಿತು
ಹೊರಗೆ ನಿಲುವುದು ಹೊಸಿಲ ದಾಟದು !
ಹಿರಿಯತನದ ಹೆಮ್ಮೆಗಡಲು
ಹರಿಯತೆಮ್ಮಯ ಮಧ್ಯದಿ.

ಆರು ತಿಂಗಳ ಕಳೆದೆವಿಂತು.
ಊರೆ ಮೆಚ್ಚಿದ ಮರಿಯನೊಂದು
ಇರುಳೊಳೊಯ್ದನು ಕಳ್ಳನದನು
ಮನೆಯ ಮಕ್ಕಳ ಮುದ್ದನು.

ಎದ್ದು ಹುಡುಗರು ನಾಯ ಕಾಣದೆ
ಬಿದ್ದು ಬೀಳುತಲೋಡಿಬಂದು
' ಕದ್ದರೇಸೋ ? ಮರಿಯ ಕಾಣೆವು '
ಎಂದು ಕಂಬನಿಗರೆದರು.

ಕೇರಿ ಕೇರಿಗೆ ಜನರನಟ್ಟಿದೆ
ಊರ ಊರನು ತಿರುಗಿ ಕೇಳಿದೆ
ಆರ ಕಂಡರು ' ಮರಿಯ ಕಾಣಿರ '
ಎಂದು ಹುಚ್ಚನ ತೆರದೊಳು.

ಮೂರುದಿನಗಳು ಹುಡುಕಿ ಕೊನೆಗೆ
ಊರ ಮುಂದಿನ ಮನೆಯ ಹೊರಗೆ
ಏರುಬಿಸಿಲೊಳು ಕುರುಬನೆಡೆಯೊಳು
ಕಂಡೆ ಮಲಗಿದ ಕುನ್ನಿಯ.

ಹರುಷ ಮಿಾರಿತು ಬಾಲವಾಡಿಸಿ
ಗುರುತ ಹಿಡಿಯುತ ನೆಗೆಯೆ ನಾಯಿ
ಕುರುಬಗೌಡನ ಗದರಿ ಕೇಳಿದೆ
'ಕದ್ದೆಯೇತಕೊ ಮರಿಯನು ?'

ನಡುಗಿ ಕೈಗಳ ಮುಗಿದು ನಿಂತು
ನುಡಿದನೀ ಪರಿ ಕುರುಬಗೌಡನು
'ಒಡೆಯ, ಮರಿಯನು ಕದಿಯಲಿಲ್ಲವು
ಹಿಂದೆ ಬಂದಿತು ಕರೆಯದೆ.

'ಅಂದು ಊರೊಳಗಿರುಳು ತಂಗಿ
ಮುಂದೆ ಪಯಣವ ಬೆಳೆಸಲೆಂದು
ಮಂದಿ ಮಲಗಿದ ಹೊತ್ತಿನಲ್ಲಿ
ನಿಮ್ಮ ಜಗಲಿಗೆ ಬಂದೆನು.

'ಮರಿಯು ಬಗುಳುತ ಅಡ್ಡಗಟ್ಟಲು
ತೆರೆದು ಬುತ್ತಿಯ ರೊಟ್ಟಿಯಿಟ್ಟೆನು
ಹರುಷದಿಂದಲಿ ತಲೆಯ ತಟ್ಟಿ
ಮೈಯ ತಡಹಿದೆ ನಾಯಿಯ.

'ಚಳಿಗೆ ನಡುಗಲು ಮರುಕದಿಂದ
ಕೆಳಗೆ ಕಂಬಳಿಹಾಸಿ ಜೊತೆಯೊಳು
ಚೆಲುವು ಮರಿಗೂ ತಾಣವಿತ್ತೆನು
ಒಲುಮೆ ಬೆಸೆಯಿತು ಇಬ್ಬರ.

'ಮೂಡ ಬೆಳಗಲು ಹೊರಟೆನಂದು
ಓಡಿ ಹಿಂದೆಯೆ ಬರಲು ಮರಿಯು
ಕೂಡಲಪ್ಪುತ ಮುತ್ತನಿಟ್ಟು
ಕರೆದು ತಂದೆನು ಊರಿಗೆ.

'ಬಂಧುಬಳಗಗಳಿಲ್ಲವೆನಗೆ
ಕಂದನೀ ಮರಿ—ಕಳೆಯಲಾರೆ'
ಎಂದ. ಗೌಡನ ಕಣ್ಣು ಹನಿತುದು
ಮರಿಯ ಹಗ್ಗವ ಹಿಡಿಯಲು.

ಹಗ್ಗವೆಳೆದೆನು ; ಕುನ್ನಿ ಬಾರದು
ಸಗ್ಗದೆನ್ನಯ ಸವಿಯ ನುಡಿಗೆ.
ಹಗ್ಗಸಡಿಲಿಸಿ ಬಿಟ್ಟೆನದನು
ಕುರುಬ ತಬ್ಬಿದ ಸೊಣಗನ!

ವರುಷ ನೂರರ ಕರುಣೆ ಬಿಗಿವುದೆ
ಕುರುಬನಿರುಳೊಳು ಬಿಗಿದ ಕಟ್ಟ!
ಮರಿಯ ನಡತೆಗೆ ಕೋಪಗೊಳ್ವುದೆ?
ಕರುಣೆ ಒಲುಮೆಗೆ ಸಾಟಿಯೆ?

ಒಲಿದರಿರವಿನ ಬಗೆಗಳೆರಡೆ?
ಒಲುಮೆಗಡ್ಡಲೆ ಕುಲದ ಹೆಮ್ಮೆ?
ಒಲುಮೆಬೆಸುಗೆಯ ಸುಖದ ಸವಿಯನು
ತಿಳಿಯದೇ ಬಡಜಂತುವು!

ಕಣ್ಣ ನೀರೊಳು ತೊಳೆದೆನೆಂದು
ಜನ್ಮದುನ್ನತಿ ಹೆಮ್ಮೆ ಕೊಳೆಯ—
ನನ್ನ ಒಲುಮೆಗೆ ಅಡ್ಡಬಂದ
ಕರುಣೆ ಹಾಯದ ಬಿಂಕವ.

# ತಾಯಿಯ ಮುದ್ದು

೧

ನಿದ್ದೆಯೊಳಿದ್ದೆನೊ ಎಚ್ಚರವಿದ್ದೆನೊ
  ನನಸೋ ಕನಸೋ ಎಂತರಿವೆ ?
ವರುಷವೆ ತುಂಬದ ಕೂಸಾಗಿರೆ ನಾ
  ಎನಗಿದ್ದಿತು ಹಿರಿಯನ ಪರಿವೆ.

ಎಳೆಯನ ಮುದ್ದಿಡುತಿದ್ದಳು ತಾಯಿ
  ತುಟಿಗಿಳಿಯುತ್ತಿರೆ ಕಣ್ಣೀರು.
ತುಟಿಜೇನಿನ ಸಿಹಿಗುಪ್ಪಿನ ರುಚಿ ಬರೆ
  ಆ ರುಚಿಯನು ಬಣ್ಣಿಪರಾರು !

ಒಲಿದನುಪೇಕ್ಷೆಯೊ ಕರುಬಿನ ಭಿಕ್ಷೆಯೊ—
  'ನೀನಲ್ಲದೆ ನನಗಿಲ್ಲೆ'ಂಬ
ಅನನ್ಯಶರಣೆಯ ಭಾವದೊಳಬ್ಬಿಯು
  ನನ್ನನು ಮುದ್ದಿಟ್ಟಳು ತುಂಬ.

ಹೊಳಪಿನ ಕಣ್ಣಿನ ಹೊಳಪೇ ಹರಿವೊಲು,
  ಮುತ್ತಿನ ಹರಳೇ ಕರಗಿದೊಲು,
ನೋವಿನ ಪದದಿಂದಿಳಿಯುವ ಗಂಗೆಯೆ
  ಕಂದನ ತುಟಿಯೊಳು ತಂಗುವೊಲು,

ಮುದ್ದಿನೊಳಿಳಿವಾ ಕ್ಷಾರದ ನೀರನು
  ಕೆನ್ನೆಯ ತಟ್ಟುತ ಚಪ್ಪರಿಸಿ
ಕುಡಿದೆನು ಕೇಗುತ ಜನನಿಯ ಮೊಗದೊಳು
  ಮಂಗಳಮೃದುಹಾಸವ ತರಿಸಿ.

ನನಸಿನಾಳದಿಂ ಕನಸಿಗೆ ಸುಳಿದೀ
  ಅನುಭೂತಿಯ ಚಿಂತಿಸುತಿರುವೆ
ನಗೆ ಹೊಗರಿಟ್ಟಾ ಕಂಬನಿಯೆದೆವಾ-
  ಳೀಂಟುತ ಬೆಳೆದೆನು ಎಂದರಿವೆ.

# ಪ್ರತೀಕ್ಷೆ

ಇಂದು ಏನಾಗಿಹುದೆ, ಗೆಳತಿ
ಏಕೆ ಸಡಗರಗೊಳ್ವೆನೇ ?
ಕಡಲಿನಗಲದ ಕೇರಿ ಹರಹನು
ಹಾರಿಬರುವೆಲರಾರ ದೂತನೆ,
ಸುದ್ದಿಯಾವುದ ಪೇಳ್ವನೇ ?

ಕತ್ತಲಿದು ಮುನ್ನೀರಿನಂದದಿ
ತಿರೆಯ ಮುಳುಗಿಸಿ ಹಬ್ಬಿದೆ ;
ಒಡೆದ ಹಡಗುಗಳಂತೆ ಮನೆ ಮಠ
ಅದರ ತಲದೊಳು ಬಿದ್ದಿದೆ—ಮನ
ಬೆದರಿ ಬಯಕೆಯು ತಬ್ಬಿದೆ.

ಎಲ್ಲ ಕರಣವ ಕಿವಿಗೆ ಹೊಂದಿಸಿ
ನಿಲ್ಲುವೆನು ದನಿಯರಸುತ,
ಅನ್ಯಗಿಲ್ಲದ ಧೀರಗಮನದ
ಛಂದವಾಲಿಪ ನಲ್ಲದೊಂದನೆ
ತುಡಿಯುವೆದೆಯೊಳು ಹರಸುತ.

ಅಕೊ—

ಬಾನವರಿಗಿಳೆನೆನಪ ತರುವೀ
ಗುಡಿಯ ಗಂಟೆಯ ಬಾಜನೆ
ಬೀದಿಯೊಳು ನೂರ್ ಕೊರಲ ತರುತಿದೆ ;
ಹೃದಯದೇಕಾಂತವನು ಸಾರುವ
ದನಿಯ ತಹುದೋ ಕಾಣೆನೇ.

ಅದೊ ಅವನ ನೇಹಿಗನ ನಗೆನುಡಿ—
ಅಗಲಿದರು—ಬಹನಿತ್ತೆಡೆ !
ಒಳಪೊಗುವೆ, ಕನ್ನಡಿಯ ಮುಂಗಡೆ
ತುಸ ನಿಲುವೆ, ಹೊರಬರುವೆ, ಲಾಲಿಪ-
ನೆದೆಯ ಹಾಸುವೆ ನಡೆವೆಡೆ.

ಬಹನು ಬರುತಿಹನವ್ವ—ಬಂದನು—
ಕಂಡರೇಗತಿ ಕಾಣೆನೇ !—
ಬಯಕೆಕೊಡೆವಿಡಿದೊಲುಮೆಯುತ್ಸವ
ನನ್ನ ನರಸಿಯೆ ಬಳಿಗೆ ಬಂದಿರೆ
ಕಾಣದೊಲು ಮರೆನಿಂದೆನೇ !

# ಅವನು—ಅವಳು

ಕಲನಾದಿನಿ ಕಾವೇರಿಯ ತೀರದಿ
ತನ್ನನೆ ನೆನೆಯುತಲವನಿದ್ದ ;
ತನ್ನ ಬಿಜ್ಜೆ ಕುಲ ಶೀಲ ಸಂಪತ್ತು
ತನ್ನ ರೂಪು ತನ್ನೊಳೆ ಇದ್ದ.

ತನ್ನವರೊಲ್ಲದ ಸರಸತಿ ನವವಧು
ಗಂಡನ ಮಡಿವಾಳಿತಿಯಾಗಿ
ಹಿಂಡುಬಟ್ಟೆಗಳ ಹಿಂಡಲು ಬಂದಳು
ಜವ್ವನದುಲ್ಲಸದೊಳು ತೂಗಿ.

ಕರೆಯೊಳಗಿಬ್ಬರೆ—ಆರೋ ಎನ್ನುತ
ಸೆರಗೆದೆಗೆಳೆವಳು ನಾಚುತಲಿ,
ಬಳಿಕಿವನೇ—ಸರಿ—ಭಯವೇನೆನ್ನುತ
ಹೊಳೆಗಿಳಿವಳು ನಿರ್ಲಕ್ಷ್ಯದಲಿ.

ಬಿಂಕದವನೀತ, ಬಿಂಕದವಳಾಕೆ,
ಮೌನ ನೆರವು ಮನ ಮಾತಾಡೆ ;
ಕಣ್ ಕಣ್ ಕೂಟವೆ ಸಾಕಾಯ್ತುವರಿಗೆ
ಬೇಟದ ಬಿರುನುಡಿ ಸಿಡಿದಾಡೆ.

"ಆಹಾ ನೀ ಸುಂದರಿ, ದಿಟ, ಆದೊಡೆ
ಮರುಕವ ತರುವುದು ಈ ಚೆಲುವು ;
ಇದರಿಂಬಿಗೆ ನಿರ್ಭಾಗ್ಯರ ಮನೆಯೇ ?
ಎನ್ನುತ ಸುಯ್ಯುವುದೆನ್ನೊಲವು."

ಎನಲಾಕೆಯು ತಾತ್ಸಾರದಿ ನುಡಿವಳು :
"ನಿನ್ನ ಮರುಕವಾರಿಗೆ ಬೇಕು !
ಸುಮ್ಮನಿರೈ ನನ್ನಿದಿರೇ ಈ ಹಿಡಿ-
ಹೊನ್ನಳತೆಯ ನೇಹದ ಕಾಕು."

ಎನೆ ಅವನಿಂತೆಂದನು ನಸು ನಾಚುತ:
“ತಪ್ಪು ತಪ್ಪು ನಮ್ಮಪ್ಪನದೊಪ್ಪಿದೆ;
ಹಣಕೂ ಮಿಗಿಲಾಯ್ತಭಿಮಾನ.
ಕೇಳಿದ ತಪ್ಪಿಗೆ ಕೊಡೆನೆನ್ನುವ ತ-
ಪ್ಪೀ ಹೋರಾಟದಿ ಸೊಗವೂನ.”

ಸರಸತಿ ವೌನದೊಳೇ ಮರುನುಡಿದಳು:
“ತಪ್ಪೋ ಒಪ್ಪೋ ಸೊಗವೋ ಸುಯ್ಯಲೊ
ನಿನ್ನದು ನಿನಗೆನ್ನದು ನನಗೆ—
ನಿನ್ನವರ ಬಿಂಕಕೆನ್ನೊಲವೆ ಸುಂಕ?
ಪೋ, ಇನ್ನಾ ಮಾತೇಕೆಮಗೆ!

ನಿನ್ನ ರೂಪ ಸಿರಿ ಬಿಜ್ಜೆ ಬಿಗುಮಾನ
ನಿನಗೆಯೆ ಇರಲೀ ಪಿತೃಭಕ್ತಿ—
ಇದೆ ಸಾಕಿದೆಸಾಕಿದೆಸಾಕೆನಗೀ
ಬಡವರ ನೆರವಿನೊಳೇ ಮುಕ್ತಿ.”

ಬಿರುಸಿನೊಳೊಗೆಯುವ ಬಟ್ಟೆಯ ಸದ್ದಿನೊ-
ಳೀ ತೆರ ಬಿರುನುಡಿಗಳ ನುಡಿದು
ಕಜ್ಜ ತೀರೆ ಮೇಲೆದ್ದು ನಡೆದಳು
ರೂಪಶೀಲದಿಂದೆದೆ ಕಡೆದು.

ಹುಸಿಮರುಕದ ಹೊಗೆಯಾರುತಲಾಸೆಯ
ಕಿಡಿಯುರಿದೊಲುಮೆಯ ಬೆಳಕಾಗಿ
ಬಿಂಕವ ಸುಟ್ಟು ನಿರಾಸೆಯ ತೋರಲು
ಎಂತು ಸುಯ್ದನವ ನಿಡಿದಾಗಿ!

# ಅವರು

ಇಲ್ಲಿ ಅವನು ಅಲ್ಲಿ ಅವಳು
ಹೊಸಿಲ ಕುದುರೆಯೇರಿ ಹಸುಳೆ ಆಡುತಿರುವನು.
ಅದರ ಲಲ್ಲೆಯಲ್ಲಿ ನಲವಿ-
ನೆಲ್ಲೆಯನ್ನು ಕಾಣುತವನು ಲಲ್ಲೆಗರೆವನು.

ಬಿಸಿಲ ಹೊಳಪನೊಳಗೆ ಚೆಲ್ಲಿ
ನೋಟದಿಂದ ಆಸೆಸರಳನವಳಿಗೆಸೆಯುತ
ನಡೆವನೊಬ್ಬ ಗುಡಿಯ ಕಡೆಗೆ,
ಮನದ ಗೂಡ, ನೆನಪುದುಂಬಿಯೇಳೆ, ಕೆದಕುತ.

ಎಲೆಗೆ ಕಡ್ಡಿ ಹಚ್ಚಿ ಮುರಿವ
ತಾಳಕೊಂದಿ ನಡೆವುದವಳ ಭವದ ಭಾವನೆ
ಇವನೊಳಿಲ್ಲ ಅವನೊಳಿಲ್ಲ
ಎಳೆಯನಲ್ಲಿ ಮಾತ್ರ ಅರ್ಧ ಅವಳ ಕಾಮನೆ.

ಹತ್ತು ವರ್ಷ ಒಟ್ಟಿಗಿದ್ದೂ
ಮನವ ಮನವ ಒಲುಮೆಕಾವು ಬೆಸೆಯಲಿಲ್ಲವು.
ನಗೆಯ ಜಾಣ ಸಿಡುಕ ಕಾಣ
ಆಕೆಯೆಂದರವಗೆ ಪ್ರಾಣ—ಅವಳೆ ಎಲ್ಲವು.

ಮಂದ್ರದಲ್ಲಿ ಇವನ ಮಿಡಿತ
ತಾರದಲ್ಲಿ ಅವಳ ನುಡಿತ—ಶ್ರುತಿಯೆ ಸೇರದು
ಅವಳಾಸೆಯನೀತನೆಟುಕ
ಆಕೆಗಿವನೊಳಾಯ್ತು ಮುರುಕ—ಭಾವವೇರದು.

ಹಸುಳೆ ಅವನದಲ್ಲ—ಎಲ್ಲ
ಜನಕು ಅವರ ಕನಸ ತೋರ್ವ ಗುಡಿಯ ಗುಟ್ಟಿದು.
ಪ್ರಕೃತಿಯ ಹಿಮ್ಮೇಳವಾಗಿ
ಕಾಮನಂದು ಬಾಜಿಸಿದ್ದ ಹಾಡ ಮಟ್ಟಿದು.

ಒಲವಸರಿಯದಾಸೆಪುರುಕ
ಇದರ ತಂದೆ ; ಕೆಂಡಕಣ್ಣಿನಾಡುದಾಡಿಯ
ಋಷಿಜನಂಗಳಿದರ ಹಿಂದೆ
ತೋರಿ ಮಿಡಿವರಿವಳ ಮನದ ಧರ್ಮನಾಡಿಯ.

ಮರುಳು ಗಂಡ ನರೆಯ ಹೊರೆಯ
ಚುಚ್ಚುಮಾತನರಿಯಲಾರ—ಪ್ರೇಮಬಧಿರನು ;
ನೇಹದಿಂದ ಅವಳ ಪೊರೆದು
ಉತ್ಸವದೊಳೆ ಭವಕೆ ತಂದನಾಸೆಕದಿರನು.

ಅಜ್ಞನಲ್ಲ ಪ್ರಾಜ್ಞನಲ್ಲ
ಅನಸೂಯನು ಸಹನಶೀಲ ಸ್ನೇಹಪೂರ್ಣನು ;
ಉನ್ನತಮತಿ ಸತ್ಯಕಾಮೆ
ಆದೊಡಸತಿ—ಎಂತು ಬಾಳ್ವೆಳೆರಡು ಬಾಳನು ?

ಒಮ್ಮೆ ನಲಿವಳೊಮ್ಮೆ ಮುನಿವ-
ಳೊಮ್ಮೆ ಅಂಜುತೆದೆಗೆ ಹಸುಳೆಯವಿಚಿಕೊಳುವಳು.
ನಗಲು ನಗುವಳತ್ತು ಕಾಡೆ
ವಿಟನ ಬಗೆಯ ಕಂಡು ಹೇಸುವಂತೆ ಹೊಡೆವಳು.

ಎಳೆಯಗೊಲಿಯೆ ತನಗೆ ಒಲಿವ-
ಳೆನುತ, ಮುಳಿಯೆ ತನಗೆ ಮುಳಿವಳೆನ್ನುತೀತನು
ಹಸುಳೆ ನೋಯೆ ತನಗೆ ನೊಂದ-
ನೆಂದು ನೊಂದು ಮುದ್ದಿನಿಂದ ಮುದ್ದುಗೈವನು.

ನೇಹವೊಂದನರಿತ ಮುಗ್ಧ
ಸಲಿಗೆ ತೋರದೊಲಿಯಬಲ್ಲ ಸರಳನೀ ಪತಿ.
ತನ್ನರಲ್ಲ—ತಾನೆ ಇವರಿ-
ಗೆಂಬ ರೀತಿ ಪ್ರೀತಿಯಿಡಲು ಬಲ್ಲನೀ ಪತಿ.

ಇಂಥ ಶುದ್ಧ ಸತ್ತ್ವನಿಂದ
ಆಕೆಗಾಯ್ತು ಅವಳೆ ನಾಚುವಂಥ ಬಾಳುವೆ.
ಬಾಳ ದಡವ ಮೀರಿ ಹರಿದ
ಕಾಮದೆಡರ ದಾಟಲಾದನಿವನೆ ಸೇತುವೆ.

ಕಾಮಿಯ ಕೆಡುನೋಟ ಸೋಕಿ
ಮನ ಮೈಲಿಗೆಯಾದ ಪರಿಯೊಳಾಕೆ ಈ ದಿನ
ಶುದ್ಧಿಗೆಳಸಿ ದಿಟ್ಟಿಸುವಳು
ಸುತನ ಜತೆಗೆ ಲಲ್ಲೆಯಾಡುತಿರುವ ಗಂಡನ.

ಪೊಲ್ಲಾಸೆಯ ನೂರು ಬಲಿಯ
ನೆನೆದು ನೋಳ್ಪಳಿವನ—ತಣ್ಣನೊಲುಮೆಯವನನು,
ತನ್ನ ವಿಷವನೆಲ್ಲ ಕುಡಿದ
ಇಂದುಧರನೆ ಈತನೆಂಬ ಬೆರಗೊಳಿವನನು.

ಅನ್ಯಳಿಂದು ತನ್ನ ಳಾದ-
ಳೇನೊ ಎನುವ ತೆರದೊಳಾಕೆಯಾರ್ದ್ರ ದೃಷ್ಟಿಗೆ
ಮರುದಿಟ್ಟಿಯನಿಡುವನೀತ
ಹಸುಳೆ ಎಸೆವ ತೊದಲುನುಡಿಯ ಪುಷ್ಪವೃಷ್ಟಿಗೆ.

# ನರ್ತಕಿಯೊಬ್ಬಳ ನಾಟ್ಯವನ್ನು ನೆನೆದು

ಬಾ ಬಾ ಮೋಹನೆ—ಬೇಗ

ಗೆಜ್ಜೆಯುಲಿಯೆ ಗೆಲು ಗೆಲ್ ಗೆಲ್ಲುಲಿವ
ಹೆಜ್ಜೆ ಹೆಜ್ಜೆಗೂ ಹೃದಯವ ತುಳಿವ
ನಸುನಗುವ ಹುಸಿಮುಳಿವ ಬಿಸವಂದದ ಸುಂದರಿ ನೀ
ಬೇಗ ಬಾ. . .

ನಮ್ಮಿರವಿಂದಾವಮೃತವ ಪಡೆಯೆ,
ಆರಾಡಿಪರೀ ಮಂತನು ಅರಿಯೆ.
ಚಲಿಚಲಿಸುತ ಎದೆಯುಬ್ಬಿಸಿ ನೋವೆಬ್ಬಿಸಿ ನಲಿವವಳೇ
ಬೇಗ ಬಾ . . .

ನೀ ಹೆಡೆಬಿಚ್ಚುವ ಹಾವಂತಿರುವೆ
ಗರಿಕೆದರಿದ ನವಿಲಂದದಿ ಕುಣಿವೆ
ಇನ್ನಿಲ್ಲದ ಕಡುಬೆಡಗಿನ ಸಿಂಗಾರದ ಬಂಗಾರವೆ
ಬೇಗ ಬಾ . . .

ನಿನ್ನೊಂದಾಸೆಯೆ ನಮಗುಳಿವಂತೆ
ಮಿಕ್ಕಾಸೆಗೆ ಪೋ ಪೋ ಎನುವಂತೆ
ಥಳುಕುವೆ ಬಳುಕುವೆ ಕಣ್ಮನವೆಮ್ಮುಳಿದೋಡುವ ಪರಿಯೊಳು
ಬೇಗ ಬಾ . . .

# ಸಿರಿವಂತ ಸೂಳೆಯರ ಹಾಡು

ಬನ್ನಿರೇ ಸಖಿ, ಎನ್ನಿರೇ—ನಲವೊಂದೆಯೇ ಸಾರ
ನಮಗು ಮುದಕು ನೇರಾ
ಭವದೂರಾ.

ಹಸುರೊಳು ಹೊಳೆಯುವ ಹಿಮಮಣಿಯಂತೆ
ಅಲೆಮೇಲಾಡುವ ಹೊಂಬಿಸಿಲಂತೆ
ಮನುಜರಾಸೆ ಮೇಲೆ
ಆಗಲೆಮ್ಮ ಲೀಲೆ
ಹಗುರುಬಗೆಯ ನಗೆಯ ಹೊಗರ ನೆರೆ
ಹರುಷವಹುದಪಾರಾ.

ಒಲಿವೆನೊಲಿವೆನೆನೆ ಒಲಿಯೆವು ನಾವು
ನಮ್ಮ ಸಿರಿಗನ್ನ ನಿಮ್ಮೆದೆ ಸೋವು
"ಚೆಲುವೆ ಓ, ನಲವೆ ಹಾ, ಕೊಳುವೆಯಾ ಅಸುವಾ"
ಎಂಬ ದೈನ್ಯಕಾನಂದಿಸುವಾ
ಹರಳುಬಿಗಿಯ ಹುರುಳಿನೆದೆಯ ಹೊರ-
ಹೊಳಪ ತೋರ್ಪೆವಾವು.

ನಮ್ಮಾಸೆನಂಜು ನಿಮಗೇರ್ವುದಲಾ
ನಿಮ್ಮಾಸೆನಂಜು ನಮಗೇರದಲಾ
ಪಡಿಯರತಿಯೊಲೆದೆಬಾಗಿಲ ಬಳಿ ನಿಂದಿರೆ ಸಿರಿಯು
ತನುಮನ ನಡೆಸಲು ಸರಸತಿಯು
ನೇಹವಿರದ ಮೋಹವೆರೆದು ಜಗವೆಲ್ಲ ಗೆಲ್ವೆವಾವು.

ಬನ್ನಿರೇ ಸಖಿ, ಎನ್ನಿರೇ— ನಲವೊಂದೆಯೇ ಸಾರ
ನಮಗು ಮುದಕು ನೇರಾ—ಭವ ದೂರಾ.

# ಬಡ ಸೂಳೆಗೆ ಅವಳ ಗೆಳತಿ

(ಸೊರಗಿರುವ ಅವಳ ನಾಲ್ಕು ಮಕ್ಕಳನ್ನು ನೋಡಿ)

ಮಡಿಮಡಿಹಾರುವ ಗುಡಿಯಲ್ಲಿ
　　ತೋಪಿನ ಗುಡಿಯಲ್ಲಿ
ಮುಟ್ಟಿಕೊಂಡು ಮೈಲಿಗೆಯಾದ ಹುಡಿಯಲ್ಲಿ
　　ಮೂಲೆಯ ಹುಡಿಯಲ್ಲಿ.
ನಿಡುನೀಟು ಸರದಾರ ನಸುಕಿನೊಳಗೆ
　　ಸಂಜೆಯ ನಸುಕಿನೊಳಗೆ
ಕಟ್ಟಿಕೊಂಡು ಸೊಟ್ಟಗಾದ ಬೇಲಿಮರೆಗೆ
　　ಬಂಗ್ಲೆಯ ಬೇಲಿಮರೆಗೆ.
ಸೆಟ್ಟರ ಹುಡುಗ ತಕ್ಕಡಿಯೆಸೆದು ಅಂಗಡಿಯಲ್ಲೆ
　　ತಾತನಂಗಡಿಯಲ್ಲೆ
ನಕ್ಕು ನುಡಿದು ತೆಪ್ಪಗಾದ ಸಂಗಡದಲ್ಲೆ
　　ನಿನ್ನ ಸಂಗಡದಲ್ಲೆ.
ಕುಕ್ಕತುಂಬ ಮಲ್ಲಿಗೆಹೂವ ನಿನಗೆ ತೆತ್ತು
　　ಮಾಲಿ ನಿನಗೆ ತೆತ್ತು
ಕಣ್ಣಾ ಕಣ್ಣಾ ತಿರುವುತಿದ್ದ ನಿನ್ನ ಸುತ್ತು
　　ವಹವಾ—ನಿನ್ನ ಸುತ್ತು.
ಜಾತಿಯೆಲ್ಲ ಕೂಡಿತವ್ವ ಉಸಿರಿನೊಳಗೆ
　　ನಿನ್ನ ಉಸಿರಿನೊಳಗೆ
ಕಾಮನಪ್ಪ ತೂರಿಬಂದ ಬಸಿರಿನೊಳಗೆ
　　ನಿನ್ನ ಬಸಿರಿನೊಳಗೆ
ತಲೆ ತೋಳು ತೊಡೆ ಕಾಲು ಪೂರ್ಣನಾಗಿ
　　ಸಂಪೂರ್ಣನಾಗಿ
ಬಿದ್ದಿಹನವ್ವ ಪರಮಪುರುಷ ಋಣವಾಗಿ
　　ನಿನ್ನ ಋಣವಾಗಿ.

ಹತೋಂ ಹತೋಂ ಧಿಮ್ಮಿತ್ತೋಂ ಧಿಮಿತ್ತೋಂ
　　ಧಿಕಿಟ ದ್ಧಿಕಿಟತ್ತೋಂ.

# ಓ ನಲ್ಲೆ—ಬಾ ಇಲ್ಲೆ

(ನವಯುವಕನ ಹಾಡು)

ಓ ನಲ್ಲೆ ಬಾ ಇಲ್ಲೆ
ಆ ಕ್ಷುಲ್ಲರೊಡನೆ ನಿನಗೇತಕೆ ಲಲ್ಲೆ !

ಹಾ ಎನ್ನೊಲವೇ ಎನ್ನಲು ಬಾಯಿಲ್ಲೇ
ಸೆಳೆದೊಯ್ಯಲು ದಿಟ್ಟಿಗೆ ಬಲವಿಲ್ಲೇ
ಹಾಹಾ ನಿನಗೆನ್ನೊಳು ದಯವಿಲ್ಲೇ
ಎನಗೆನ್ನಸು ದಕ್ಕದೆ ಇದೆಯಲ್ಲೇ
ನನ್ನೆಲ್ಲವನೀ ಮಿಕ್ಕಿಹೆಯಲ್ಲೇ
ಓ ನಲ್ಲೆ ಬಾ ಇಲ್ಲೆ
ಆ ಕ್ಷುಲ್ಲರೊಡನೆ ನಿನಗೇತಕೆ ಲಲ್ಲೆ ?

ತಂಪಿನಿರುಳು ಕಂಪಿನೆಲರು ಮೈದುಂಬಿದೆ ಚೆಲುವು
ನೀನೆ ಹುರುಳು ನಾನೊ ಮರುಳು ನಿನ್ನೊಂದಿದೆ ನಲವು
ಮೈಯ ಸೋಂಕಿ ಎಲರೊಯ್ಯುತ್ತಿದೆ ಹರಣ
ಹೂವಿಗಾಯ್ತು ಹಾಡಿಗಾಯ್ತು ಕಿವಿಕಣ್‌ಕರಣ
ಈ ಬೆಳುದಿಂಗಳ ಸೊಗಕೆನ್ನಿರವೆ ಋಣ
ಆ ಜೋಡಿ ನೋಡಿ ಪರಿದೋಡುವುದೆನ್ನ ಮನ
ಹಾ ಪಂಚಪ್ರಾಣ ಹಂಚಿಹೋಗುತ್ತಿದೆ ಹರಿದು
ಅದ ಮರಳಿಸೆ ನಿನಗಲ್ಲದೆ ಮಿಕ್ಕರಿಗರಿದು
ಆದೊಡೆ 'ನಿನ್ನನೊಲ್ಲೆ ನಿನ್ನನೊಲ್ಲೆ' ಎನುವಂತಿದೆಯಲ್ಲೆ
ನೀನವರಿವರೊಡನಾಡುವ ಬರಿಲಲ್ಲೆ
ನೀನೆ ನಲ್ಲೆ ನನ್ನಾಣೆಗು ನಿನ್ನುಳಿದೆನಗಿಲ್ಲೆ
ಇದ ನೀ ಬಲ್ಲೆ !

ಓ ನಲ್ಲೆ ಬಾ ಇಲ್ಲೆ
ಆ ಕ್ಷುಲ್ಲಗೊಡನೆ ನಿನಗೇತಕೆ ಲಲ್ಲೆ !

# ನವಿರಂಗಿ

ಒಂದೂರಿನಲ್ಲಿ ಒಬ್ಬರಸಿದ್ದ
ಅವನುಡುಪೆಂದರೆ ಬಹು ಪ್ರಸಿದ್ಧ.
ಒಮ್ಮೆಗೆ ಓಲಗದೊಳು ಕುಳಿತಿರಲು
ಬಂದೆರೆಡೆಗೆ ಇಬ್ಬರು ದರ್ಜಿಗಳು.
"ಕಂಡೂ ಕಾಣದ ತೆರ ನವಿರಾಗಿಹ
ಗಾಳಿಗು ಆಕಾಶಕು ತೆಳುವಾಗಿಹ
ಸೋಜಿಗದುಡುಪನು ಹೊಲಿಯುವೆ"ವೆಂದು
ಆಣೆಯನಿಟ್ಟರು ಎಲ್ಲರ ಮುಂದು.
ಅರಸಗೆ ಉಡುಪೆಂದರೆ ಬಲು ಆಸೆ.
ನಂಬಿಸಿತವನನು ಠಕ್ಕರ ಭಾಷೆ.
ಒಂದು ವರುಷ ಗಡುಬನು ಕೇಳಿದರು
ರಾಶಿಹೊನ್ನ ಮುಂಗಡ ಕೇಳಿದರು.
ಉಡುಪಿನಾಸೆಗರಸಸ್ತು ಎಂದ
ಅವರೆರೆತಕೆಲ್ಲಕೂ "ಹ್ಞೂ" ಎಂದ.
ಇಂತು ಬೊಕ್ಕಸವ ಬರಿದನು ಮಾಡಿ
ನೆಯ್ಯುವ ಹೊಲಿಯುವ ಆಟವ ಹೂಡಿ
ಜಾಣರಿಗೇ ಇದು ಕಾಣುವುದೆಂದು
ಸಾಮಾನ್ಯರಿಗೆಂದಿಗು ಅಲ್ಲೆಂದು
ಬಂದವರಿಗೆಲ್ಲ ಬಯಲನೆ ತೋರಿ
ಇಲ್ಲದುಡುಪಿನಂದವನೇ ಸಾರಿ
ಎಲ್ಲರ ನಂಬಿಸಿದರು ದರ್ಜಿಗಳು.
ಇದರ ಮಾತನಡುಗೂಲಜ್ಜಿಗಳು
ಹರಡಿದರೆಲ್ಲೆಡೆ. ಜಾತ್ರೆ ಸೇರಯಿತು.
ದೊರೆ ಉಡುಪನುಡುವ ದಿನವೇರ್ಪಟ್ಟಿತು.
ಉಟ್ಟನರಸನೀ ಬಯಲುಬಟ್ಟೆಯ,
ಬೆತ್ತಲೆಯೊಳೆ ಕೊಂಡನು ಜನದಿಟ್ಟಿಯ !
"ಅಯ್ಯೋ ! ಬರಿಮೈ" ಎಂದರು ಜನ ಮನದೊಳಗೆ,
"ಆಹಾ ವಸ್ತ್ರದ ನವಿರೆಂಥದು !" ಎಂದರು ಹೊರಗೆ.

ಆದೊಡೆ ಮಗುವೊಂದು
" ಅಯ್ಯೋ ಬೆತ್ತಲೆಬಸವನ ನೋಡೆ "ಂದು
ಚಪ್ಪಳೆಯಿಕ್ಕಿತು ; ಎಂಥ ದಿಟ್ಟತನ!
" ಹೌದೇ, ಬರಿಬೆತ್ತಲೆ! " ಎಂದರು ಊರ ಜನ.
" ದಿಟ, ದಿಟ " ಪಿಸುಗುಟ್ಟಿತು ಪರಿವಾರ ;
ಅಳುಕಿ ಅಳುಕಿ " ಹೌದೆ "ಂದಿತು ಸರಕಾರ.
ಆಗರಸನು ಬೆಚ್ಚಿ
" ಕೆಟ್ಟೆನಿವರ ನೆಚ್ಚಿ "
ಎನ್ನುತ ಅವಮಾನಕೆ ಕಣ್ಮುಚ್ಚಿ
ಓಡಿದನರಮನೆಗೆ,
ತಿಂಗಳವರೆಗೂ ಬಾರದೆ ಹೊರಗೆ.
ನೀವೇನೆನ್ನುವಿರೀ ಕತೆಗೆ ?

ಈ ಕವನ ಹಾನ್ಸ್ ಆಂಡರ್‌ಸೆನ್ ಅವರ ಕತೆಯೊಂದರ ಭಾವಾನುವಾದ.

# ಯುದ್ಧಸಮರ್ಥನ ವಾದ

ಸತ್ಯವೆ ಗೆಲ್ಲುವುದು
ಅನೃತವು ಅಲ್ತು
ಇದು ಭವಿಷ್ಯತ್ತು.

ಗೆದ್ದುದೆ ಸತ್ಯ
ಸೋತುದೆ ಮಿಥ್ಯ
ಭೂತದ ರೀತ್ಯಾ.

ವರ್ತಮಾನದೊಳೊ ?—
ಸಂಗ್ರಾಮವೆ ಸತ್ಯ
ಶಾಂತಿಯೆ ಮಿಥ್ಯ
ಮಿಗಿಲೆನೆ ಇದರಿತ್ಯರ್ಥಕೆ
ಸಮರವೆ ಮುಖ್ಯ
ಶಾಂತಿಯಸಹ್ಯ.

ಸಂಗ್ರಾಮದೊಳೇ ಸತ್ಯದ ಸುಳಿವು
ಸಂಗ್ರಾಮದೊಳೇ ಮಿಥ್ಯೆಯ ಅಳಿವು
ನನ್ನಿಯಾಸೆ ಜನಕೆಂದಿನವರೆಗೋ
ಆ ವರೆಗೂ ಹೋರಾಟವು ಸಿದ್ಧ
ಇದು ಸತ್ಯೋಪಾಸನೆ ಶುದ್ಧ
ಇದಕೆನುವರು ಯುದ್ಧ.

ಈ ಯುದ್ಧ ಸಮರ್ಥನವಾದ
ಓದುವಗೆಸಗಲಿ ಮೋದ!

# ಪ್ರಶ್ನೆ—ಉತ್ತರ

ಮಾಮರ ತಳಿತಿಹುದೇತಕ್ಕೆ ?—
ಕೋಗಿಲೆ ಸರಗೈಯಲಿ ಎಂದು.
ಹೂಗಿಡ ಮಲರಿಹುದೇತಕ್ಕೆ ?—
ತುಂಬಿಯು ಬಂಬಲಿಸಲಿ ಎಂದು.
ಪಾರ್‍ಕುಗಳು ಹಚ್ಚನೆ ಹಸುರೇತಕ್ಕೆ ?—
ಗರಿಕೆಯ ರಸವನು ಹೀರುತ್ತ
ಭಾವಾವೇಶವ ಹೊಂದಲಿ ಎಂದೇ
ಕವಿಜನ ನಿಟ್ಟಿಸಿ ಬಾನತ್ತ !

# ವಿಮರ್ಶಕನ ಕಷ್ಟ

ಅಗೊ ಅಗೊ ಬಂದ
ಓ ಹೊತ್ತಗೆಯನೆ ತಂದ!
ನಾಚುತ ನಿಂದ
"ಬಿಡುವಿಹುದೇ?" ಎಂದ.

ಬಿಡುವಿಲ್ಲದೆ ಏನು?—
ಇದು ಈತನ ಜಾಣು.
ಬಾ ಇನ್ನೇನು,
ಆಡಿಸು ಗೋಣು.

ಕಟತಟಕಟವೆನುತ
ಏನೀ ನುಡಿಸಿಡಿತ!
ಇದೆ ಈತನ ಬೆರಗು,
ಎನ್ನಯ ಕೊರಗು.

"ಚೆನ್ನವೆ ಎಂತು?"—
ಅಯ್ಯೋ ಬಡ ಜಂತು,
ನಸ್ನೊಪ್ಪಿಗೆ ಬೇಕೆ?
ಇವಗೀ ಚಟವೇಕೆ?

ಏನೋ ಆಸೆ
ಹವಣಿಲ್ಲದ ಭಾಷೆ
ಭಾವವೊ ಕುರುಡು
ಮಾತಿಗೊ ಹುರುಡು.

"ಕಲ್ಪನೆ ಉತ್ಕೃಷ್ಟ
ನುಡಿ ತುಸ ಕ್ಲಿಷ್ಟ
ಅರ್ಥವಿದಸ್ಪಷ್ಟ
ಅರಿಯಲು ಕಷ್ಟ"

ಇಂತೆನೆ ನಾನು
ಈ ಸರಸತಿಸೂನು,
ನಂಬುವನೇನು,
ಬಿದ್ದರು ಬಾನು!

ಎಲ್ಲದರೊಳು ಜಾಣ
ಕಬ್ಬದಿ ಕೋಣ—
ಎನೆ, ನೇಹವೆ ಊನ!
ಒಳ್ಳಿತು ಮೌನ.

# ಬಿನದ

೧

ಬಾ ಕೆಳೆಯ, ಬಾ ಕೆಳೆಯ
    ಹೋಗೋಣ ಬಾ—
ಗುಡ್ಡವೆದ್ದಿಹ ಕಡೆಗೆ
ಕಣಿವೆ ಬಿದ್ದಿಹ ಕಡೆಗೆ
ತೊರೆಯುರುಳಿ ದನಿಹರಳ ಹೊಳೆಸುವೆಡೆಗೆ.
    ಇಲ್ಲದಿರೆ,
ಜಲದ ಜಲ್ಪವ ಕೇಳಿ ಕೊಳದ ತಡಿಗೆ.

ಹೆಡೆಯ ತೆರದೊಳು ಮಲೆಯ
ನೆಳಲನಾಡಿಪ ಕೆರೆಯ
ಸನಿಯದುಪವನದಲ್ಲಿ ನಡೆದಾಡುವ.
    ಇದು ಬೇಡ?
ನೀರ್ಮುತ್ತಿನಾಟವನೆ ನೆರೆ ನೋಡುವ.

ಶೀಲವತಿಯರು ತೋರೆ
ಬಿನ್ನಣದ ಬಿಸಿಲ್ಗುದುರೆ
ಬನದಿ, ಅದನಾಸೆಯೊಳು ಹಿಡಿಯೋಣ ಬಾ.
    ಒಲ್ಲೆಯಾ?
ಬಯಲಲೆದು ಬೇಸರವ ಪಡೆಯೋಣ ಬಾ.

೨

ಮಲೆಯ ಮೇಲೇನಿಹುದೊ
ತೊರೆಬನದೊಳೇನಿಹುದೊ
ಕೆರೆಯೊಳೇನೋ ಕೊಳದ ತಡಿಯೊಳೇನೋ
ಹಗ್ಗ-ಹಾವಿನ ಗರತಿಚೆಲುವೊಳೇನೋ?

ಗುಡಿಯ ಕೈಸಾಲೆಯೊಳು
ಶಾಮು-ಶಾಮುಗಳಿರಲು
ಬೇರೆ ಬಿನದವೆ ನಮಗೆ, ಬಾರೊ ಬೆಪ್ಪೆ,
ಅವರ ಮಾತಿನ ಮತ್ತಿಗೆಲ್ಲ ಸಪ್ಪೆ!

# ಮುತ್ತಣ್ಣ—ಸಾಬಿ—ದೊರೆಸಾಮಿ—ದೇವರು

## ೧ ಮುತ್ತಣ್ಣ

ಮೇಲೂರ ಮುತ್ತಣ್ಣ ಬಲು ಬುದ್ಧಿವಂತ
ಅವನ ಮಾತೇ ಮಾತು ಅದಕಿಲ್ಲ ಅಂತ
ಯಾರೆಂಬುದೊಂದಿಲ್ಲ ವೇಳೆಯೊಂದಿಲ್ಲ
ಎಲ್ಲ ಜನವೂ ಬಳಕೆ, ಸಯಿಕೆ ಕುಂದಿಲ್ಲ.
ನಮ್ಮ ಮನದಾರೋಗ್ಯಕವನ ಸಹವಾಸ
ಮಲೆಗಾಳಿಯಂತಿಹುದು; ಹೊಳೆಬಗೆಯ ಹಾಸ
ಮಂಕನೇಳಿಪುದಣ್ಣ ಏನದರ ಬಣ್ಣ!
'ಹೇಗೆ ಬೆಳೆಯಿತು ಬೊಜ್ಜು ನಿನಗೆ, ಮುತ್ತಣ್ಣ,
ಏನುಂಡೆ' ಎನೆ, ಎಂಬ: 'ಸತ್ತವರ ಪಿಂಡ!
ಅವರ ಸ್ವರ್ಗಕೆ ಎತ್ತೆ ಇಂಥ ದೋರ್ದಂಡ
ಮತ್ತಾರಿಗುಂಟಯ್ಯ ಈ ಊರಿನೊಳಗೆ?
ಎತ್ತಬೇಕಿರಿಸಬೇಕುರುಳದಂತಿಳೆಗೆ
ಅದಕೆನಗೆ ನಿಮಂತ್ರಣೆ ಮೂರುದಿನಕೊಮ್ಮೆ
ಹಿರಿಯ ಪಿತೃದೇವರನು ಹೊರಲಾನೆ ಎಮ್ಮೆ.
ನಮ್ಮ ಬ್ರಾಹ್ಮಣ್ಯದಲಿ ಶ್ರಾದ್ಧವೇ ಸಾರ
ಅದರ ಬಲವಿಲ್ಲದಿರಲೆಲ್ಲಿ ಸಂಸಾರ?'
ಎಂದು ನಗುವನು ಶ್ವೇತಮೃತ್ತಿಕೆಯ ತೀಡಿ
ಇದರ ಕೈಗೆಯ್ಮೆಯೊಳು ಯಾರಿವಗೆ ಜೋಡಿ?
ಕೊಕ್ಕರೆಯ ಗರಿಗಿಂತ ಬಿಳಿಯ ತಿರುಮಣ್ಣು—
ಎಲ್ಲ ಮೊಗದೊಳು ಹೊಳೆವಳಿವನ ಜಸವೆಣ್ಣು.
ಯತಿರಾಜರಿವನಿಗಿದೆ ಗಳಿಸಿಟ್ಟ ಆಸ್ತಿ
ಇವಗು ಆ ಸಾಬಿಗೂ ಬಹಬಹಳ ದೋಸ್ತಿ.
ಇವನ ತಿರುಮಣ್ಣಿಡಲು ಅವನ ತಿರುಪುಟ್ಟಿ;
ಬೇಹಾರವೆಷ್ಟಿರಲಿ ಒಂದಿಲ್ಲ ಬಿಟ್ಟಿ.
ಯಾ ಅಲ್ಲ, ಏ ಸಾಮಿ, ಎಂದವನು ಬರುವ
ಉಡಿದಾರ ತಿರುಚೂರ್ಣ ಎಲ್ಲವನು ತರುವ.
"ಹರಿಯಲ್ಲ ಹರನಲ್ಲ ದಿಟ ನಿಮ್ಮ ಅಲ್ಲ
ನರಸಿಂಹನೂ ಅಲ್ಲ ನಾರಣನು ಅಲ್ಲ

ನೇತಿ ಎಂಬುದೆ ಅಲ್ಲ ಇತಿ ಎಂಬುದಲ್ಲ
ಆದೊಡಲ್ಲನ ಇಲ್ಲ ಎಂಬಗುಸಿರಿಲ್ಲ
ಅಲ್ಲವೇ ಸಾಬಿ ?" ಎನೆ, ಅರೆ ಅಲ್ಲ ಎನುವ.
ಏತಿ ಎಂದರೆ ಪ್ರೀತಿ ಎಂಬ ಪಂಥದವ
ನೀತಿ ಪ್ರೀತಿಗಳಲ್ಲಿ ಮಿಗಿಲೆ ಇಲ್ಲದವ
ವಾರ ವಾರಕು ಇರುಳನವನಿಲ್ಲೆ ಕಳೆವ.
"ನಾ ಗೈವೆ ಜನಿವಾರ ನೀನು ಉಡಿದಾರ,
ನಾ ನಾಮಕಾರ ನೀ ತಿರುಚೂರ್ಣಕಾರ
ಈ ಊರ ಹಾರುವಿಕೆಗಾವೆ ಆಧಾರ"
ಇಂತೆನಲು ಮುತ್ತಣ್ಣ, ನಗುವನವ ಪೂರ
"ಹೊರುವರೆಂದರೆ ಚೆನ್ನ ಹಾರುವರಿಗಿಂತ ;
ನಮಗಿಲ್ಲವೀ ಭಾರ ಈ ಹೊರುವ ಪಂಥ"
ಇಂತಿವರ ಬಗೆ ತಾಗಿ ಕೆದರುವುದು ಹೊಗರ
ಇವರನಾಲಿಸುತಿರಲು ನಮ್ಮ ಬಗೆ ಹಗುರ.
ದಿಟವಾಗಿ ಮುತ್ತಣ್ಣಗೀತನೊಳು ಭಕ್ತಿ
ಇವ ನಮಾಜನು ಮಾಡೆ ನೋಡಲಾಸಕ್ತಿ ;
ಎಂಥ ರಾಗದ ರಚನೆ ಈ ಮೊರೆಯೊಳೆಂಬ
ಭಾವದಂತಾಗುವನು ಈ ದೇವರೆಂಬ
ಶೂನ್ಯದಿಂ ಸೃಷ್ಟಿಯನು ಗೈವುದಿಂತೆಂಬ
ವ್ಯೋಮದಿಂ ಕಾಮವನು ಕರೆವುದಿಂತೆಂಬ
ಗದ್ದಲವ ಮಾಡುತಿರೆ ಸದ್ದು ಸದ್ದೆಂಬ
ಯಾವುದೋ ಯಕ್ಷಿಣಿಯ ನಿರುಕಿಪೊಲು ಕಾಂಬ.
"ದೇವಭಾವದ ಹೊಳೆಗೆ ಮರಳುಕಡ ಸಾಬಿ,
ಕಲ್ಲುಕಡವೆಮ್ಮ ಗುಡಿ ಭಟ್ಟನೇ ದೋಭಿ,
ಮನವ ಮಡಿಯಾಗಿಡಲು ದಮ್ಮಡಿಯ ತಮುಡಿ
ನಮಗೆ ಬೇಕೀತನಿಗೊ ಸಲ್ಮೊರೆಯೆ ತಮುಡಿ"
ಇಂತೊರೆವನೊಮ್ಮೊಮ್ಮೆ ಮುತ್ತಣ್ಣನೆಮಗೆ.
ಪಡುವಲೋ ಮೂಡಲೋ ಎಲ್ಲವೊಳಿತವಗೆ
ಆಸ್ತಿಕ್ಯ ನಾಸ್ತಿಕ್ಯವೆರಡು ಬೇಕಿವಗೆ
ಆಸ್ತಿಕ್ಯದಾಧಿಕ್ಯ ನಾಸ್ತಿಕ್ಯ ಇವಗೆ.

ನವಶಾಸ್ತ್ರಿ ದೊರೆಸಾಮಿ ಇವಗಚ್ಚು ಮೆಚ್ಚು
ವೇದವೇದಾಂತಗಳೆ ಅವನಿದಿರು ಪೆಚ್ಚು !
" ಮನುಜನಿಗು ಮಿಗಿಲಿಲ್ಲ ಮನಕು ಮಿಗಿಲಿಲ್ಲ
ಇವನರಿವೆ ಜಗದೆಲ್ಲೆ, ಇದಕೆ ಹೊರತಿಲ್ಲ.
ತಿಳಿವ ಮೀರಿಹುದಿಹುದೊ ? ಎಂತು ಇಹುದೆಂಬೆ ?
ನಿನ್ನೀ ವಿತರ್ಕದೊಳೆ ನಾನಿಲ್ಲವೆಂಬೆ
ನನ್ನ ನೀ ನಂಬೆ ನಾನೂ ನಿನ್ನ ನಂಬೆ"
" ಅಬ್ಬ ನಿನ್ನೀ ವಾದಕೆನ್ನ ತಿಳಿವೆಂಬೆ ?
ಎಂತರಿವೆನೋ ನಿನಗೆ ತಿಳಿವಿಹುದು ಎನುತ ! "
ಎನ್ನುವನು ಮುತ್ತಣ್ಣ ಹುಸಿನಗೆಯ ನಗುತ.
" ತಿಳಿವಿರಲು ತಿಳಿವುದ್ಕೆ ಇಲ್ಲದಿರಲಿಲ್ಲ
ಭಕ್ತಿಗೂ ನನ್ನುಕ್ತಿಗೂ ನೇಹವಿಲ್ಲ.
ಗುಡಿಯು ಪೊಂಗಲು ಹಿತ ಅದಕೆ ಪೂಜೆ ಕತ
ಅದರ ಸೇವನೆಗಿದರ ಸ್ಪೈರಣೆಯೆ ವಿಹಿತ.
ರಾಮಾನುಜರು ಕಂಡ ವೈಕುಂಠ ಕನಸು
ಆಹ ನಮಗಾಗುತಿದೆ ತೇಂಗೊಳಲ ನನಸು
ಅಂದರಸುಕುವರಿಯನು ಮೆಟ್ಟಿದ್ದ ದೆವ್ವ
ಇಂದೆಮಗೆ ಸವಿತಿಂಡಿಯುಣಿಸುತಿರುವವ್ವ.
ನಮೊ ಅದಕೆ ಅದರಧಿಷ್ಠಾನದರಮನೆಗು
ಅದನಟ್ಟಿದಾ ಯತಿಗು ಅವರನಟ್ಟಿದಗು
ಆ ಮಹಾಗುರು ನೆಟ್ಟ ಗುರುಪರಂಪರೆಗು
ಪುಳಿಯೋರೆಯಿರದೆ ಮೊರೆಯುದ ಶಾತ್ತುಮೊರೆಗು
ಕಣ್ಮುಚ್ಚಿ ಕೈ ಮುಗಿದು ಕೂಳ್‌ಕಾಯ್ವ ನಿಮಗು
ಮುಗಿಯದೇ ನಿಮ್ಮ ಮರೆಯೊಳು ಬಾಳ್ವ ನನಗು ! "
ನವಯುವಕ ಇಂತೆನಲು, " ದಿಟ, ಪುಣ್ಯವಂತ
ಕೊಡಲು ಬೇಕಿಲ್ಲ ನೀನವಗೆ ಭಕ್ತಿ ಕಂತ.
ಸಂಕಟವೆ ಇಲ್ಲದಗೆ ವೆಂಕಟನು ಬೇಕೆ
ಸಂತೋಷವುಳ್ಳವಗೆ ದಾಸೋಹವೇಕೆ ?
ದೇವರೊಲಿಯದ ನಮಗೆ ದಿನ ಅವನ ಚಿಂತೆ.
ಅವನಿಂಬುತುಂಬಿರುವ ನಿನಗಿಲ್ಲ ಚಿಂತೆ

ಆಸ್ತಿಕ್ಯದಾಧಿಕ್ಯ ನಿನ್ನ ನಾಸ್ತಿಕ್ಯ
ದೈವವುಳ್ಳಗೆ ದೇವರುಂಟೆನೆ ಅಶಕ್ಯ"
ಇಂತು ಮುತ್ತಣ್ಣನೆನೆ, "ಗುಡಿಯ ರಸದೂಟ
ನನಗಿರಲಿ, ನೀವಿಟ್ಟುಕೊಳಿ ದೇವರೋಟ"
ಎಂದು ಕೊಂಕನು ನುಡಿದು ಎಲ್ಲವನು ನಗುವ
ದೊರೆಸಾಮಿಯನು ಕುರಿತು ಮುತ್ತಣ್ಣನೆನುವ
"ಎಳೆಯ ಕರುವಿಗೆ ಮೊಳೆವ ಕೊಂಬುಗಳ ಕಡಿತ
ಅಂತೆಮ್ಮ ದೊರೆಸಾಮಿಗೂ ಕಲಿತನುಡಿತ.
ಇದರ ನವೆ ತೀರಿಸಲು ನನ್ನರಿವೆ ಮೋಟುಕಂಬ
ಏತಕೂ ಸಗ್ಗದಿಹ ಮೊದ್ದುಮನವೆನ್ನ ಜಂಬ."

ಇಂತು ನಡೆವುದು ಮಾತು ಸರಸಸುಮ್ಮಾನದಿಂದ
ಲಾಮಂಚವೂರಿರುವ ತೀರ್ಥಾಂಬುಪಾನದಿಂದ.

# ಜುಟ್ಟು

ನನ್ನ ಜುಟ್ಟನದಾರು ಮೆಚ್ಚರು ನೋಡು ನೋಡಿದರಾವುಟ
ನನ್ನ ನೇಹಿಗರೆಲ್ಲರಚ್ಚರಿ ನನ್ನ ತಲೆಯೀ ಬಾವುಟ.
'ಭಟ್ಟವಂಶದಿ ಹುಟ್ಟ ಪಡೆದುದು ಸಾರ್ಥವೆನಿಸಿದನೀ ಭಟ
ಮ್ಲೇಚ್ಛರಿದಿರೊಳು ಸ್ವೇಚ್ಛೆಯಿಂದಲಿ ಮತವ ಮೆರೆದಿಹನೇಹಟ!'
ಎಂದು ಮುತ್ತಣ್ಣಾದಿ ಮುಖ್ಯರು ನನ್ನ ಹೊಗಳುವ ತೆರದೊಳು
ಟೋಪಿ ಪೇಟವ ತೊರೆದು ಪಿಳ್ಳನೆ ಜುಟ್ಟ ತೋರುವೆ ಊರೊಳು.

ಜುಟ್ಟನಿಟ್ಟಿಹ ಮಂದಿಯೇ ಹೆಚ್ಚೆಮ್ಮ ಹೆಮ್ಮೆಯ ಪುರದೊಳು
ಹೆಂಗಸರ ಕೈಚಳಕ ಮೆರೆವುದು ಗಂಡಸರ ಸಿರಿಮುಡಿಯೊಳು.
ನೆತ್ತಿಮೇಲೆತ್ತಿರುವ ಮಕುಟವ ಹೋಲುವಂತಹ ಮುಡಿಗಳು,
ಸೋರುಮುಡಿಗಳು, ಜೋರುಮುಡಿ, ಬಾದಾಮಿಬೊಂಬಯಿಮುಡಿಗಳು,
ಕಿವಿಯ ಕುರುಳಿನ, ನಿರಿಯ ಬೆಡಗಿನ, ಮಲರ ಸೊಗಸಿನ ಮುಡಿಗಳು,
ಬಿಚ್ಚಲಾಗದ ಮುಡಿಗಳು, ಬಲು ಮುಟ್ಟಿ ನೋಡುವ ಮುಡಿಗಳು,
ತಗ್ಗಿ ನಡೆಯುವ ಕುಲವಧೂಜನ ಪತಿಯ ಜಗ್ಗಿಸಿ ಕಿರಿಚಿಸು
ನಗುತ ನಿಸ್ಸಂಕೋಚ ಬಾಚುವ ಸರಸಕಿವೆ ತವರೆನ್ನಿಸಿ
ಮೆರೆವುವೆಮ್ಮಯ ಪುರದಿ—ಉಹು ಉಹು—ಮೆರೆದುವೆಂಬುದೆ ನನ್ನಿಯು;
ನೆವಕೆ ಜುಟ್ಟಿದೆ ಜನಕೆ ಈಗಳು, ಸಿಂಗರಕೆ ಬರಿ ಸೊನ್ನೆಯು!
ಹೊಟ್ಟೆಗೇ ಹಿಟ್ಟಿಲ್ಲವಾಗಿರೆ ಜುಟ್ಟಿಗೇತಕೆ ಮಲ್ಲಿಗೆ
ಎಂಬ ವೈರಾಗ್ಯದೊಳು ನಲುಗುತ ಸಮವಿದಾಗಿದೆ ಹುಲ್ಲಿಗೆ.
ತೈಲ ಬಾಚಣಿಗೆಗಳ ಕಾಣದೆ ಬೆರಲ ತಳಿರೊಡನಾಡದೆ
ನಲ್ಲೆಯರ ಸವಿಲಲ್ಲೆಯಾಲಿಸಿ ಲಲಿತಬಂಧದಿ ಕೂಡದೆ
ಸೊರಗಿಹೋಗಿದೆ ಬಹಳ ತಲೆಯೊಳು—ನನ್ನ ತಲೆಯೊಳವಿಂತೆಯೇ
ಪತಿಗೆ ಪತ್ನಿಯ ಲಕ್ಷ್ಯ ತಪ್ಪುವ ಅಳತೆ ಇದೊ ಎನುವಂತೆಯೇ.

ಮುರುಗಲೇಕವರಿವರ ಜುಟ್ಟಿನ ಪಾಡ ನೆನೆದಾನೀ ತೆರ
ನನ್ನ ತಲೆಗೂದಲಿನ ಚರಿತೆಗೆ ನನ್ನ ಮುಸಿಮಿಗಲದೆ ತರ.
ಶಿಖಾರಂಭಣ ಚೌಲಕರ್ಮದ ವೆಚ್ಚದಿಂ ಬೆಲೆಯಾಯಿತು
ವರ ಸನಾತನ ಧರ್ಮರಕ್ಷೆಗೆ ಮಂಡೆಗದ್ದುಗೆಯೇರಿತು.

ಪರಸ್ಥಳದೊಳು ಎಣ್ಣೆಸೀಗೆಯ ವೆಚ್ಚ ಹೆಚ್ಚಲು ತಗ್ಗಿತು
ಆಂಗ್ಲ ವಿದ್ಯೆಗಳೊಳಗೆ ಬೆಳೆದಂತಿದರ ವರ್ತುಳ ಕುಗ್ಗಿತು
ಟೋಪಿ ಹೊರಗಡೆ ತೋರಲಂಜುತ ಟೋಪಿಯೊಳಗಡೆ ನುಗ್ಗಿತು
ಕ್ಷೌರ ಕ್ಷೌರಕು ಇದರ ಪಾಳೆಯಪಟ್ಟಿನೆಲ್ಲೆಯೆ ಮಗ್ಗಿತು.
ಮೊಗಲಿರಿದಿರು ಪ್ರತಾಪನಂದದಿ ತಲೆಯರಾವಳಿ ಮಳೆಯೊಳು
ಹದುಗಿ ಕೃಶಕೃಶವಾಗುತಾದರು ಮೂರ್ಖಗೊಪ್ಪವ ಧೃತಿಯೊಳು
ಪರರ ವಿಶ್ವಾಕ್ರಮಣ ಸಂಸ್ಕೃತಿ ದಾಳಿಯೆದುರಿಸಿ ನಿಂತಿದೆ
ಗೆಲವ ಕಾಣದೆ ಸೋಲನೊಲ್ಲದೆ ತಲೆಯ ಸಿಟ್ಟುಸಿರಂತಿದೆ.

ಕಚ್ಚೆಪಂಚೆಯನುಟ್ಟು ಮೈಮೇಲುತ್ತರೀಯವ ಹೊದ್ದಿರೆ
ಕೆನ್ನೆಗಡ್ಡದ ಕುರುಚುಕಾಡಿನ ಮೇಡಿನೊಲು ಮುಡಿಯೆದ್ದಿರೆ
ಜುಟ್ಟರೂರೊಳು ಜುಟ್ಟ ಮೆರಸುವ ಹಿತಕು ಮಿಕ್ಕಿನದೇನಿದೆ?
ಮುಂಗುರಳ ಸೀಮಂತರೂರೊಳೊ ಜುಟ್ಟೆ ಹರಿಜನವಾಗಿದೆ.
ಹಿಂದಿನಿಂ ಮುಂದೋಡಿತೇತಕೆ ನಮ್ಮ ಯುವಕರ ಕೂದಲು
ಎಂದು ಸೋಜಿಗಗೊಂಡು ಚಿಂತಿಪೆ, ಬಿಡಿಸದೊಗಟಿದು ಈಗಳೂ!
ಹೆಣ್ಣುಮೇಲಧಿಕಾರ ತಪ್ಪಲು ಗಂಡಿಗೀ ಕುರುಹಾಯಿತೋ
ಹಿಂಜುಟ್ಟ ಜಗ್ಗಾಟದುಪಟಲಕಿಂತ ಇದೆ ಮೇಲಾಯಿತೋ?
ನುಣ್ಕಪೋಲದ ನಾಸ್ತಿಮೀಸೆಯ ವಾಮಕೇಶದ ರಂಜನ
ಉತ್ತಮಾರ್ಧದ ಉತ್ತಮಿಕೆಯನೆ ಮೆರಸಲೆಂದೋ?—ಕಾಣೆ ನಾ.
ಆದಕೆ ಕುರುಳಿರದವನ ಮೆಚ್ಚುವ ವಧುಗಳಿಲ್ಲೀ ಕಾಲದಿ
ತಮ್ಮ ಶ್ರೇಷ್ಠತೆಯೊಪ್ಪಿಕೊಂಬರ ಕಾಣುತೀ ಅನುಕರಣದಿ.
ಇಂದು ಹಿಂಗೂದಲಿನ ಮಂದನ ಮಡದಿಗೆಲ್ಲರ ಕನಿಕರ
ಮುಡಿಯನೊಪ್ಪಿಸುವನಕ ಆಕೆಗು ಈತನಾಗನು ಹಿತಕರ.
ನೋಡಿರೈ, ದೊರೆಸಾಮಿ ಹೆಂಡತಿ, ನಳಿನಿ, ಏ ಪರಿ ಗಂಡನ
ನಮ್ಮೆದಿರೆ ದಟ್ಟಿಸುತಲಿರುವಳು! ಇಂಥ ಸರಸದ ದಂಡನ
ಜುಟ್ಟುಳ್ಳ ನಮಗಿಲ್ಲವೆನ್ನುತ ಒಮ್ಮೆಗೊಮ್ಮೆಗೆ ಕೊರಗುವೆ
ಶುಷ್ಕವ್ರತವಿದ ಪಾಲಿಸುತ ಬಾಳ್ ವ್ಯರ್ಥವಾಯಿತು ಎನ್ನುವೆ.

ಇಂದು, ಮುಡಿಯುಳ್ಳವನಿಗಾವನು ನಡೆವನಂಜುತ ಪೇಳಿರೈ
ಆಂಗ್ಲ ಅಮೆರಿಕ ರಷ್ಯ ರಾಜ್ಯದಿ ಜುಟ್ಟರಿಹರೇ ಪೇಳಿರೈ

ಲೋಕನಾಯಕರಿವರ ತೇಜವ ಹೊಳೆಸುವೆಲ್ಲರ ತಲೆಯೊಳು
ಮುಡಿಯ ಕಾಂಬಿರ ? ಎಡರಿದಲ್ಲವೆ ಪ್ರತಿಫಲನಸತ್ಕಲೆಯೊಳು ?
ಶಕ್ತಿಸೂರ್ಯನ ಗ್ರಹಗಳಾಗುವ ಬಯಕೆಯುಳ್ಳವರೆಲ್ಲರೂ
ಜುಟ್ಟುಕೇತುವನೊತ್ತಿ ಕಳೆಯಿರಿ—ಎನ್ನು ವಾಹವಮಲ್ಲರು
ತೋರ್ಕೆಯಿಂದಲೆ ಲೋಕಕಭಯವನೀವ ಜುಟ್ಟಿನ ಮಹಿಮೆಯ
ತಿಳಿದು ತಲೆಯೊಳು ಮೆರಸಬಾರದೆ ಅಂತೆ ಶಾಂತಿಯ ಗರಿಮೆಯ

ಆದೊಡಯ್ಯೋ ಕಡಲ ದಾಟರು ಜುಟ್ಟನುಳ್ಳವರಾಳರು
ಜುಟ್ಟನುಳ್ಳರು ನಲ್ಲರಾಗರು ಜುಟ್ಟರನು ಜನವೊಲ್ಲರು
ಜುಟ್ಟನುಳ್ಳರು ಪಟ್ಟಣದಿ ತಲೆ ಮುಚ್ಚಿಕೊಂಡೇ ನಡೆವರು
ಬುಟ್ಟಿಯೊಳಗದನಿಟ್ಟು ದುರುದುರುದಿಟ್ಟಿಯಿಂ ಕಾಪಿಡುವರು.

ಜುಟ್ಟನಿಟ್ಟವಗಿಷ್ಟು ಕಷ್ಟಗಳಿದ್ದರೂ ಜುಟ್ಟೀತಕೆ ?
ಈಗ ಹೊಳೆವೀ ಗುಟ್ಟ ಕೇಳಿರಿ : ಅದುವೆ ನಿರ್ಭಯಮಾತೃಕೆ.
ಅದನು ಬಿಟ್ಟಿಹ ತಲೆಯ ಮುಟ್ಟದು ಎಂಥ ಇಸ್ಷಮೇ ಆಗಲಿ
ಸೋಷಲಿಸ್ಟಮೋ ಕಮ್ಯುನಿಸ್ಟಮೋ ಬಹದುರ್‌ಇಸ್ಲಮೇ ಆಗಲಿ.
ಪರಜ್ವರಗಳಿಗೆಲ್ಲ ತಡೆಯನು ಕಟ್ಟಲಿದುವೇ ಯಂತ್ರವೈ
ಪಶ್ಚಿಮದ ಚಾಪಲ್ಯಪಾತವ ತಪ್ಪಿಸಲು ಇದೆ ತಂತ್ರವೈ.
" ಹಳತರೊಲವೂ ಹಳ್ಳಿಯೊಲವೂ ಸೊಳ್ಳೆ ಕಳ್ಳಿಯೊಳೆಂತೆಯೋ
ಅಂತೆ ನಿಮ್ಮಾ ಜುಟ್ಟಿನೊಳಗೂ ಅಂಟಿಕೊಂಡಿಹವೆಂತೆಯೋ "
ಎನ್ನುವೀ ದೊರೆಸಾಮಿಯಂಥರ ನಗೆಗು ಇದು ಬಲು ಬಲ್ಲಿತೈ
ಶಿವಗೆ ಗರವೆಂತಂತೆ ನಮಗೀ ಶಿರೋಭೂಷಣವೊಳ್ಳಿತೈ.
ಜಗದ ಸಂಸ್ಕೃತಿಯೆಲ್ಲ ನಮ್ಮಯ ಮಾತೃಸಂಸ್ಕೃತಿ ಜಠರದಿ
ಜೀರ್ಣವಾಗುತ ಆತ್ಮಪುಷ್ಟಿಗೆ ರಸವನೊದಗಿಪ ಮಾಟದಿ
ಬುದ್ಧಿಗೊದಗುವ ಪಾಚನಾಗ್ನಿಯ ಧೂಮವೆನಿಸುವ ಲೇಸಿದೈ
ಇದನು ನೇವರಿಸುತ್ತಲಿರೆ ನಾನೆನ್ನ ಪ್ರತಿಭೆಯು ಮಾಸದೈ.

ನಮ್ಮ ದೇಶ ವಿಮುಕ್ತವಾಗುವ ವೇಳೆಗಾನೀ ಜುಟ್ಟನೇ
ಮುಡುಪನೊಪ್ಪಿಸೆ ಸಿದ್ಧನಾಗಿಹೆ. ನನ್ನ ಬಿಡಿ ; ಮುತ್ತಣ್ಣನೇ
ಕ್ಷೌರಕನ ಕರೆದಿಂತು ಹೇಳಿರೆ, ಎಂಥ ಹಂಬಲು ಅವಗಿದು !
ಆ ಸುದಿನ ಬರುವನಕ ನಮ್ಮಾ ತಲೆಯ ಬಾವುಟವಿಳಿಯದು !

# ಹಸು—ಕರು

ಹಸುವಿನ ಹೆಸರು ಯಶೋದಾ
　　ಅದರ ಬಣ್ಣ ಊದಾ
ಅದೊಂದು ಕರುವನು ಈದ
　　ಸಂಗತಿಯೇನು ಪ್ರಮಾದ ?
ಅದರಿಂದೆನಗೀ ಕವಿತೆಯ ಬಾಧ
　　ಪ್ರಾಸವ ಬರೆವ ವಿನೋದ.

　　ನಾನದಕಿತ್ತುದು ನೂರು ರುಪಾಯಿ
ಮಧ್ಯಸ್ಥಿಕೆಗಿರೆ ರಂಗಾಬೋಯಿ
ನೆರೆಮನೆಯೊಳಗಿದಕಾಯಿತು ಸಾಲ
ಬಿತ್ತರಿಸಿತೆಮ್ಮ ಮಮತೆಯ ಜಾಲ
ಇಂತು ಯಶೋದೆಯ ಬಾಳಿನ ಮೇಲೆ
ಪ್ರಕೃತಿಯ ಮತ್ತೊಂದಾವರಣದವೊಲೆ.
ಇದಕೂ ಚೆಂದದ ಹಸುವಿನ್ನುಂಟೆ
ಇದರ ಸುಗುಣಗಳು ನಾಲ್ಕೆ ಎಂಟೆ
ಗಿಡ್ಡವಾಗಿಹುದು ಕರೆಯುವ ಜಾತಿ
ಸೌಮ್ಯವಾದ ಬಲು ಅಂದದ ಮೂರ್ತಿ
ನಮ್ಮ ಪಾಲಿಗಿದುವೇ ಸುರಧೇನು
ಎರಡೇ ದಿನ ಈಸುವುದಿನ್ನೇನು
ಇಂತೀ ಪರಿಯೊಳು ನಡೆದಿರೆ ಮಾತು
ಪ್ರಸೂತಿವೇದನೆ ಯಶೋದೆಗಾಯ್ತು
ನಿಲ್ಲದೆ ಮಲಗದೆ ಬೇನೆಯ ತಿನುತ
ನೀರವವಾಗಿಯೆ ಬಾಧೆಯ ಪಡುತ—
ನಾನೊಪ್ಪುವೆ ಈ ನೀರವ ಭಾವ
ನನ್ನಚ್ಚರಿಸಿತು ಒಂದರೆ ಜಾವ
ಬೆದೆಗಾಲದ ಹಮ್ಮೃಸಿಕೆಯೊಳಗೆ
ಪೆರ್ಭಯದಂಬಾ ಸಂರುತಿಯೊಳಗೆ
ತನ್ನ ಹೊರಗಿರುವ ಜೇವದ ನೆರವ
ಆತ್ಮಸ್ವಾಸ್ಥ್ಯಕೆ ಯಾಚಿಸುತಿರುವ

ಪರಿಯಿಲ್ಲೀ ದಿನ ನಮ್ಮೀ ಪಶುವಿಗೆ
ತನ್ನ ಪ್ರಕೃತಿಯೆ ತನಗಾಗಿರೆ ಹಗೆ
ತಿತಿಕ್ಷೆಯೇ ಗತಿ ಬೇರಿನ್ನಿಲ್ಲ
ಎಂದರಿಯಿತೊ ಇದು ಯಾವನು ಬಲ್ಲ—
ಅಂತೂ ನೋವನು ಮೌನದಿ ಸಹಿಸಿ
ಈ ಮೌನದೊಳೆನ್ನಚ್ಚರಿಗೊಳಿಸಿ
ಯಶೋದೆ ಈದಿತು ಹೋರಿಕರುವನು
ತಾಯ ಗರ್ಭದಿಂ ಹೊರಟ ಶಿಶುವನು
ಸ್ವಾಗತಿಸಿರೆ ನಾವಮೃತದಾಸೆಯಿಂ
ಹಸು ಸುತನಂ ನೆಕ್ಕಿತು ಅಕ್ಕರೆಯಿಂ.
ಎಳೆಯರು ಕರೆದರು ಗೋಪೀನಾಥ
ಹೊಸಬನಿವನು ಆದೊಡೆ ನಿರ್ಭೀತ
ರೋದನವಿಲ್ಲದೆ ಜಗಕ್ಕೆ ಬಂದ
ಎರಡೇ ಚಣ್ದೊಳು ಸ್ವತಂತ್ರ ನಿಂದ
ಕೆಚ್ಚಲಿನೊಳು ತನ್ನನ್ನವ ಕಂಡ
ಅಧಿಪತಿಯಂದದಿ ತಾನದನುಂಡ.
ಈತನ ಮೈಯೇನಚ್ಚರಿಮಾಟ
ಈತನ ಬಗೆ ಏ ಮಾಯೆಯ ಹೂಟ
ಅಗೊ ಅಗೊ ನನ್ನೆಡೆ ಕೊಂಕಿನ ನೋಟವ-
ನಿಡುತಿಹನಬ್ಬಾ ನೋಡಿವನಾಟವ
ಗರ್ಭದಿ ನಿನ್ನಾಲಿಯ ಸಮೆವಂದು
ನೋಟವದಾವುದ ಬಯಸಿದೆ ಬಂಧು
ಆ ಕತ್ತಲೆಯೊಳು ಏ ಬೆಳಕನ್ನ
ಹಾರೈಸಿದ್ದೆಯೊ ನೀ ಬಹ ಮುನ್ನ
ಈ ಜಗವಚ್ಚರಿಯಲ್ಲವೆ ನಿನಗೆ
ಇಲ್ಲಿ ಕಾಂಬೆಯಾ ನೀ ಬಗೆದ ಬಗೆ?
ನೀನೀ ತೆರದೊಳು ನೋಡುವ ರೀತಿ
ಕಿವಿಯನು ನಿಮಿರಿಸುತಾಲಿಪ ರೀತಿ
ಕರಣದ ತುದಿ ವಿಷಯದ ತುದಿ ಸೇರಿ
ಏನೋ ಶಕ್ತಿಗೆ ಸಮೆಯುತ ದಾರಿ

ಏನೋ ಬೆಳಕಿನ ಹರಿವನು ತೋರಿ
ಮನದೊಳು ನವತೇಜದ ಕಳೆಬೀರಿ
ಹೊಸತೊಂದಿರವಿನ ಪರಿಯಂ ಸಾರಿ
ಹೊಸ ತೆರದೊಳು ಭವಜಲಧಿಯ ವಾರಿ
ತೆರೆಯಿಡುತಿಹ ರೀತಿಯ ತೋರುತಿದೆ
ನಿನ್ನೀ ಲೀಲೆಗೆ ನಿರ್ವ್ಯಾಜಂ ಎದೆ
ಒಲಿದಿಹುದೈ ಮುದವಾನುತಲೀಗ
ಎಲ್ಲರಿಗೂ ಮುದ್ದಾದೆಯೊ ಬೇಗ.
ಅತ್ತಣಿನಿತ್ತೆಡೆ ಬಂದಿರುವಣ್ಣಾ
ನಿನ್ನಿರವನು ಇಹ ಕವಿಯುವ ಮುನ್ನ
ಪೇಳ್ವೆ ಆವನು ನಮ್ಮಿಬ್ಬರನೂ
ನಮ್ಮಾ ನಂಟಿನ ಇವರೆಲ್ಲರನೂ
ಈ ತೆರ ತಡಿಕೆಯ ಪಂಧ್ಯದೊಳೋಡಿಸಿ
ಓಡಿಸಿ ಆಡಿಸಿ ಕಾಡಿಸಿ ಬಾಡಿಸಿ
ಪಣವೇನಂ ಗೆಲೆ ಬಯಸಿಹನಯ್ಯ ?
ಇದರೊಳು, ದಿಟ, ನಿನಗೌದಾಸೀನ್ಯ
ಈ ಓಟವು ನಿನಗಿನ್ನೂ ಲೀಲೆ
ನನ್ನ ದಣಿವಿನನುಭೂತಿಯ ಕೇಳೆ.
ಚಿಣ್ಣಾ, ತೋಳ್ತೆಕ್ಕೆಗೆ ಬಾರಣ್ಣಾ
ನಿನ್ನಾಲಿಂಗನವೆನಿತಿನಿದಣ್ಣಾ
ಹೊಸಮೈಕೂದಲ ನಸುಬಿಸಿಯಿಂಪು
ಹೊಸ ಬಾಳಿನ ಸಂಸರ್ಗದ ಸೊಂಪು
ಗಂಗಾಸ್ನಾನದ ಶುಚಿಯಾಯ್ತಣ್ಣಾ
ದೇವರ ಮುಟ್ಟಿದ ಪರಿಯಾಯ್ತಣ್ಣಾ—
ಬೆಚ್ಚುವೆ ಏಕೀ ಸ್ಪರ್ಶಕೆ ಕರುವೇ
ಈ ಮುದ್ದಿಗೆ ಈ ಒದೆತವು ತರವೇ ?
ಚಿಮ್ಮುವೆ ಹಮ್ಮೈಸುವ ತಾಯೆಡೆಗೆ
ಗರ್ಭದ ತಡೆಯಿಂ ಮಮತೆಯ ತಡೆಗೆ
ಅಂಬಾ ಎನ್ನುವೆ ನೀ ಮರುನುಡಿಗೆ
ಅಹ್ಹಾ ನೀ ನಡೆದಾಡುವ ಬೆಡಗೇ !

ಇಂತೀಪರಿಯೊಳು ಕರುವನು ಮುದ್ದಿಸಿ
ಈ ಆರ್ತಿಯೊಳೆನ್ನೊಳಗಂ ಶುದ್ಧಿಸಿ
ಹಮ್ಮೈಸುವ ತಾಯ್ನುಡಿಯಂ ಕೇಳಿ
ಅಂಬಾ ಎನ್ನುವ ಕರುವಂ ಕೇಳಿ
ಇಂತೆರಡಿರವಿನ ಬಗೆತುದಿಯಿಂದ
ವಿದ್ಯುತ್ಕಣ ಸಿಡಿದಾಡುವ ಚಂದ
ವಾತ್ಸಲ್ಯಂ ಪರಿದಾಡುವ ಬಗೆಗೆ
ಸೋಜಿಗಗೊಳ್ಳುತೆ ಯಶೋದೆಯೆಡೆಗೆ
ನಮ್ಮೀ ಗೋಪೀನಾಥನ ಬಿಟ್ಟು
ಅಂದಿನಚ್ಚರಿಗೆ ಈ ನುಡಿಗಟ್ಟು
ನನ್ನೊಳು ವೇದನೆಗೊಳ್ಳಲು ಇಂತು
ಬರೆದೆನು—ಈ ಕತೆ ಮುಗಿಯಿತು ಅಂತು.

ಇದನೋದಲು ನಾ ಮುತ್ತಣ್ಣನಿಗೆ,
"ಗದ್ಯವೊ ಪದ್ಯವೊ ಏನಿದರ ಬಗೆ
ನಿನ್ನದು, ಬಿಡು, ಬಲು ಅಂತರ್‌ದೃಷ್ಟಿ
ಸೃಷ್ಟಿಯೊಳಗೆ ನೀ ವಿಚಿತ್ರಸೃಷ್ಟಿ
ಹಸು ಕರುವೀದರೆ ಅಚ್ಚರಿಯೇಕೆ?
ಹೊಸತನುಭವ ನಿನಗಾದೊಡೆ ಜೋಕೆ
ಹೆಜ್ಜೆಹೆಜ್ಜೆಗೂ ಬೆರಗೆನಬೇಡ
ನಿನಗೇ ಬೆರಗೆಂಬರು ಜನ ನೋಡ"
ಎನುತೀ ಪರಿ ದಟ್ಟಿಸಿ ನಗೆಯಾಡಿ
ತುಸ ಚಿಂತಿಸಿ ಬಳಿಕೆನ್ನನು ನೋಡಿ
"ದಿಟ, ಸೋಜಿಗವೀ ಪಂದ್ಯದ ಓಟ
ನಮಗಿಂತಾಯಿತು ದೇವರ ಕಾಟ.
ಈ ಬಾಳ ಮುಂದೆ ಮತ್ತಾವ ತಡಿಕೆಯೋ
ಏ ಜನ್ಮವೊ ಮೇಣೇನು ದುಡಿಕೆಯೋ
ನಮಗೀ ಬಾಳಿನೊಳೇನು ರುಚಿಸದೋ
ಆ ಬಾಳೇ ಮುಂದಕೆ ನಮಗಹುದೊ?
ಎಲ್ಲಾ ಜನ್ಮದ ರುಚಿಗಳನುಂಡು
ಸಿಹಿ ಕಹಿ ಎನ್ನದ ಹದವನು ಕಂಡು

ಥೂ ಛೀ ಸ್ಪೈ ಎಂಬುದ ಬಿಡುವರೆಗೂ
ತಡಿಕೆಯ ಓಟವೆ ನನಗೂ ನಿನಗೂ.
ನಿರ್ವೈರಾಗ್ಯಗೆ ಮುಕ್ತಿಯೆ? ಭ್ರಾಂತಿ.
ಸಮತೆಗೆ ಸಲ್ಲದಗೆಲ್ಲಿಯ ಶಾಂತಿ?"
ಎನ್ನುತ ತತ್ತ್ವವನೊರೆದನು ನನಗೆ
ಇಲ್ಲಿಗೆ ಮುಗಿಯಿತು ಈ ಬರೆವಣಿಗೆ.

# ನಾಲೀಜಂಘ

ಬಾನ ಗೂಡಾರವನು, ಬೆಟ್ಟ, ನಡುಗೋಲಂತೆ
ತುಟ್ಟತುದಿಗೋಪುರದ ಮೇಲೆತ್ತಿ ಹಿಡಿದಂತೆ
ನಿಂತಿರಲು ದೂರದೊಳು, ಸುತ್ತ ನಭವಿಳಿದಿರಲು
ಸಂಜೆರಂಗಿನ ಮೋಡ ಅದನಂದಗೊಳಿಸಿರಲು,
ಸರಸಿಯೊಳು ಝುಗಝುಗಿಸಿ ರವಿಯ ಛವಿಯಾರುವೊಲು
ಹಕ್ಕಿವಿಂಡಿಂಚರಿಸಿ ಮರದೊಳಡಗುತಲಿರಲು,
ಬೈಗಿನ ಮಲರ್ವ್ವಡಿಯೊ ಎಂಬ ತೆರ ಕಣಿವೆಯೊಳು
ನೀಲಿ ನಸುಕಿನ ಜತೆಗೆ ಕೆಂಬೆಳಕು ಬೆರೆದಿರಲು,
ಲೋಕ ನಿಶ್ಚೇಷ್ಟಮಿರೆ ನೀರವತೆ ಹಬ್ಬುತಿರೆ
ಕಾಣ್ಕೆಕೇಳಿಕೆಗಿಂಬ ಕಾಣದೊಲು ಮರುಳುತಿರೆ
ಕರಣ, ಮಾನಸಗೃಹಕೆ; ಉಪರತಿಯನಾನುವೊಲು
ಜ್ಞಾನ ಧ್ಯಾನಕೆ ಸಂದು, ಸ್ವಪ್ನದೊಳಗೆಚ್ಚರಲು
ಮತ್ತೆ ತನಗಾದಂತೆ ವಿಷಯವಿಹರಣಲೀಲೆ
ತನ್ನರ್ಥಗಳ ತಾನೆ ಸೃಜಿಸುತ್ತಲಿರುವೋಲೆ;
ನಾನಂದು ಮುತ್ತಣ್ಣ ದೊರೆಸಾಮಿಯೊಡಗೂಡಿ
ಪುಷ್ಕರಿಣಿ ತೀರದೊಳು ಸಂಜೆ ಬಿಡುವನು ಮಾಡಿ
ಮೂವರೂ ಮೌನಮಿರೆ ತಂತಮ್ಮ ಕನಸಿನೊಳು
ಸುಳಿದು ದತ್ತಾತ್ರೇಯಮುನಿಯೆನ್ನ ನೆನಹಿನೊಳು
ನಡೆದರಾ 'ಪರಿಧಾನ ಶಿಲೆ'ಯತ್ತ ಹೊಗರಿಡುತ
ತಮವ ಮಿಂಚಿನ ತೆರದೊಳೆನ್ನರಿವ ಹೆದರಿಸುತ.
ಮುತ್ತಣ್ಣಗಿದನೊರೆಯೆ ಅಭಿನಂದಿಸುತ ನನ್ನ
"ಭಗವಂತನನು ಕಂಡೆ ನೀ ಪುಣ್ಯಸಂಪನ್ನ"
ಎನ್ನುತಾ ಪರಮಋುಷಿ ಇಲ್ಲಿ ತಪಮಿರುತಿರುವ
ಮನದ ಹದವರಿತೊಮ್ಮೆಗೊಮ್ಮೆ ದರ್ಶನಕೊಡುವ
ಪರಿಯ ವಿವರಿಸಿ ಅವರು ಶಾಂಡಿಲ್ಯರೊಡಗೂಡಿ
ಇಲ್ಲೆ ಋಷಿಗಳ ಜತೆಗೆ ಸಲ್ಲಾಪಗಳ ಮಾಡಿ
ನಿತ್ಯವಿರುತಿಹರೆಂಬ ದಂತಕಥೆಗಳ ಹೇಳಿ,
"ಅದರೊಳೊಂದತಿ ಸೋಜಿಗದ ಕಥೆಯಿದನು ಕೇಳಿ"
ಎಂದ:

ಈ ಬನದಲ್ಲೆ ಮರ್ಕಟವದೊಂದಿತ್ತು.
ತನ್ನ ವಾಸದ ಮರಕೆ ನರನೊರ್ವ ಭಯವೆತ್ತು
ಓಡಿ ಬಂದೇರುತಿರೆ, ಹಿಂದೆ ಹುಲಿಯಟ್ಟಿಬರೆ,
ಶಾರ್ದೂಲದಿಂ ಕೋತಿ ಸೌಮ್ಯವಾಗಿಯೆ ತೋರೆ
ಆತನಿದರಾಸರೆಯ ಕೋರಿ ಸನಿಯಕೆ ಬಂದು
ಶರಣೆನ್ನೆ ಲಾತಂಗೆ ಕೋತಿ ಕರುಣೆಗೆ ಸಂದು
ಅಭಯಕೊಡೆ, ಹುಲಿಯದಕೆ ಕ್ಷುಧಾರ್ದ್ಯೈನ್ಯತೆವೆತ್ತು
ಇಂತೆಂದಿ "ತೆಲೆ ಮಿತ್ರ, ಎನಗಪ್ಪೆಯಾ ಮಿತ್ತು ?
ನೀ ಪೊರೆಯುವೀ ನರಂ ವಿಧಿಯಿತ್ತ ತುತ್ತೆನಗೆ.
ತರವಲ್ಲ, ವನಚರಾ, ನನ್ನ ನಿನ್ನಯ ಕೆಳೆಗೆ
ನೀನವನ ರಕ್ಷಿಪುದು—ಇಂತೆನ್ನ ಶಿಕ್ಷಿಪುದು ;
ಅವನ ಮರದಿಂ ತಳ್ಳಿ ಹಿತವೆಸಗೆ ಉಚಿತವದು"
ಎನ್ನಲಾ ವಾನರಂ "ಶರಣಾಗತರ ರಕ್ಷೆ
ಸರ್ವಧರ್ಮಕು ಮಿಗಿಲು—ಇದುವೆ ನನ್ನಯ ದೀಕ್ಷೆ
ಬೇರೆ ಬೇಟೆಯನರಸಿ ನನ್ನ ಧರ್ಮವ ಪೊರೆ"
ಎಂದು ನಿರ್ಧರವೊರೆದು ಹದುಳದಿಂ ನಿದ್ದಿಸಿರೆ,
ವ್ಯಾಘ್ರನಾ ಭಯಮೂಢಮನುಜನಂ ಕುರಿತಿಂತು
ಸಂಬೋಧನೆಯ ಮಾಡಿ "ತೆಲೆ ಕೆಳೆಯ, ಕೆಳೆ ಎಂತು
ನನಗು ನಿನಗೆನಬೇಡ—ಹಸಿದಗನ್ನವೆ ಮೊದಲು
ನೀತಿನಂಟಾಬಳಿಕ—ಪ್ರಕೃತಿಋತಮಿಂತಿರಲು
ಮಧುರಭಾವವ ಮರೆತು ತುಡುಕಲೆಳಸಿದೆ ನಿನ್ನ ;
ನನ್ನವನೆ ನಾನಲ್ಲ ಈ ಹಸಿವು ತೀರ್ವನ್ನ.
ಆ ಕೋತಿಯನು ತಳ್ಳಿ ನನ್ನ ಹರಣವನುಳಿಸು
ನನ್ನನಿಂತುಪಕರಿಸಿ ನಿನ್ನ ಹದುಳವ ಗಳಿಸು"
ಇಂತೆನುವ ಹುಲಿಗೆ ಆ ಜೀವಲೋಭಿಯು ಹಿಗ್ಗಿ
ತನ್ನ ಕೊಳೆಬಾಳ್ವೆಗೀ ಕೊಳಚೆಯೆಸಕವೆ ಸುಗ್ಗಿ
ಎಂಬಂತೆ ತನ್ನ ಬಳಿ ನಿಶ್ಶಂಕೆ ನಿದ್ದಿಸಿಹ
ಹಿತಕಾರಿವಾನರನ ಕೆಳಗೆ ತಳ್ಳಿದನಹಹ !
ಬೀಳುವಂತೆಚ್ಚರುವ ಆ ಕೋತಿಯನು ಹಿಡಿದು
ಗಹಗಹಿಸಿ ನಗುತ ಹುಲಿ, ಬಾಲಬಡಿದುರೆ ನೆಗೆದು

"ತಕ್ಕುದೆಸಗಿದ ನಿನಗೆ" ಎಂದಾರೆ, ಮರ್ಕಟಂ
ವ್ಯಾಘ್ರದಾಭೀಲಮುಖವೀಕ್ಷಣಭಯೋತ್ಕಟಂ
ದಿಙ್ಮೂಢನಾಗಿರಲು, ಮರಳಿ ಹುಲಿಯದ ಕುರಿತು
ಇಂತೆಂದಿ" ತಲೆ ಮರುಳೆ, ಸದಸತ್ತುಗಳನರಿತು
ಧರ್ಮಚಾರಣೆಯೊಳಿತು—ನರನವಂ ಮೃಗವೈರಿ
ಅವನಸುವೆ ಬೆಲೆಯುವಗೆ—ಫಲವೇನವನ ದೂರಿ.
ನಾವು ನೆರೆಯವರಲಾ—ನಮಗೊಲ್ಮೆಯೇ ಕ್ಷೇಮ
ಒಬ್ಬಗೊಬ್ಬೊದಗುವುದೆ ನಮ್ಮ ಹದುಳದ ನೇಮ.
ನಿನ್ನ ಬಿಡುವೆನು—ಪೋಗು. ಆ ನರನ ತಳ್ಳಿಲ್ಲಿ"
ಎನ್ನಲಾ ಕಪಿ, ಧರ್ಮಮತಿಮುಷ್ಟಿ, "ಒಲ್ಲೊಲ್ಲೆ
ನಾನಳಿದರೇನೆನ್ನ ನನ್ನಿಯುಳಿಯಲಿ" ಎಂದು
ಶರಣುಬಂದರ ಪೊರೆವ ಛಲವೆ ತನಗಿನಿದೆಂದು,
ಅಸುವಾದರದರ ಬೆಲೆ ಈವೆ ಕೋ—ಎಂದಿತ್ತೈ—
ಎಂಬಚ್ಚರಿಯ ಕತೆಯ ಋಷಿವೃಂದವೊರೆದಿತ್ತೈ.

ದತ್ತರಿದ ಲಾಲಿಸುತ ಶಾಂಡಿಲ್ಯರೆಡೆ ನೋಡೆ,
ಅವರೊಂದು ಕತೆಯೊರೆದರಂತೆನಲು : ಈ ಕಾಡೆ
ಸರಸಿಯೊಳಕೊಂಡೊಂದು ಹಂಸಕೆಡೆಯಾಗಿತ್ತು
ತಿಳಿಜಲದ ಬಿಳಿಮುಗಿಲ ಲೀಲೆಯೇ ಮೈವೆತ್ತು
ಇಂಥ ಚೆಲುವಾಯ್ತೆನಲು. ಹೆಸರು ನಾಳೀಜಂಘ,
ಅದಕಿತ್ತು ಗಂಧರ್ವರಾಜನೊರ್ವನ ಸಂಗ.
ಒಮ್ಮೆ ಆ ಸರಸ್ತೀರಕೊರ್ವ ಪಾರ್ವನು ಬಂದು
ಬಡತನವ ಹಲುಬುತ್ತ ಮರಣವೇ ಲೇಸೆಂದು
ನೀರಿನೊಳು ದುಮ್ಮಿಕ್ಕಲೀ ಹಂಸವದ ಕಂಡು
ಈಸಿಬಂದುಳಿಸಿ ಸವಿನುಡಿದು ಮರುಕಂಗೊಂಡು
ಗಂಧರ್ವರಾಜನೆಡೆ ಕುರುಹನಿತ್ತವನಟ್ಟಿ
ಸೊಗಮಿರಲು ; ಅಲ್ಲಾಗೆ ಪಾರ್ವನಿಗೆ ಧನವೃಷ್ಟಿ
ಹೊರಲಾರದದ ಹೊತ್ತು ಬಳಲಿ ಬೆಂಡಾಗುತ್ತ
ಹಸಿವು ಬಾಯಾರಿಕೆಯೊಳಸವಳಿದು ಬೀಳುತ್ತ

ಬರಲು, ಸರದೆಡೆಯೊಳೀ ಹಂಸ ನಿದ್ದಿಸುತಿರಲು
ಇವನಳಲ ಬೆಂಕಿಗದು ಹಿಮಖಂಡದಂತಿರಲು,
ಕಂಡದನೆ ಕೊಂದು ಬೇಯಿಸಿ ತಿಂದನೇವೇಳ್ವೆ!
ಇದನರಿತ ಗಂಧರ್ವರಿಂದಿವನ ಹೊಲೆಬಾಳ್ವೆ
ನಂದಿ ನರಕಕೆ ಸಂದಿತಾ ಹಂಸಕಾಯ್ತು ದಿವ.
ಆದೊಡಿಲ್ಲಿಗೆ ನಿಲ್ಲದಿದು ಕೇಳಿ ಮುಂದಿನ ಹದವ.
ವಿಪ್ರಗಾದೀ ಗತಿಯನರಿಯುತಾ ಸಾರಸಂ
ಕಡುನೊಂದು "ಏಕೆನಗೆ ಸುಕೃತಿಯೆಂಬೀ ಜಸಂ
ಉಪಕೃತಿಯ ಗೈವೆನೆಂದಪಕಾರಿ ನಾನಾದೆ
ನನ್ನಿಂದಲಸುವಳಿದು ಜತೆಗೆ ನರಕದ ಬಾಧೆ
ಈ ಬಡವಗಾಯ್ತೆ"ಂದು ಹಂಸ ಮಮ್ಮಲಮರುಗಿ
ಸ್ವರ್ಗಭೋಗವ ತೊರೆದು ದೇವೇಂದ್ರನಡಿಗೆರಗಿ
ದೇವರೆಲ್ಲರ ಕ್ಷಮೆಯ ವಿಪ್ರನಿಗೆ ಯಾಚಿಸುತ
ತನ್ನೆಲ್ಲ ಪುಣ್ಯಗಳನವಗೆ ಮೀಸಲನಿಡುತ
ಕರೆತರಿಸಿತಾ ದಿವಕೆ ತನ್ನ ಕೊಲೆಪಾತಕನ!—
ಎನೆ; "ಚಿತ್ರತರಮಿದುವು ಶಾಂಡಿಲ್ಯರೀ ಕಥನ
ಆ ಕೋತಿಗೂ ಮಿಗಿಲು ಈ ಹಂಸ"ವೆಂದೆನುತ
ಋಷಿವೃಂದ ಶಾಂಡಿಲ್ಯರನು ಹೊಗಳಿತ್ತೈ—ಎನುತ
ಮುತ್ತಣ್ಣ ಕತೆಮುಗಿಸೆ, ದೊರೆಸಾಮಿ ಎಚ್ಚರುತ
"ಮರ್ಕಟವೆ ಮಿಗಿಲು ಸೈ ಅದರ ಚರಿತವೆ ಚರಿತ!
ಆಪತ್ತಿನೊಳಮದುವು ಅಪಕಾರಗೈದವನ
ಹದುಳವನೆ ಬಯಸಿತಲ, ಶರಣು ಬಂದಿರುವವನ
ಪೊರೆಯಲೀ ಮತಿ ಲೇಸು" ಎನಲು, "ಹಂಸವೆ ಮಿಗಿಲು.
ಅದುವೊ ಛಲ—ಇದೊ ಚಿತ್ತಪರಿಪಾಕ ಫಲ"ವೆನಲು
ಮುತ್ತಣ್ಣ, ನಾನಿವರನವರ ವಾದಕೆ ಬಿಟ್ಟು
ಈ ಕತೆಗಳಾಮೋದದಾವರಣೆಗೆದೆಕೊಟ್ಟು—
"ಇವ ಕುರಿತ ಮನ ಹಿರಿದು, ಇವನೊರೆದ ಮನ ಹಿರಿದು
ಇವರ ಮಹಿಮೆಯನರಿತು ಸರಿಯೆಂಬ ಮತಿ ಹಿರಿದು!
ಅಪಕಾರಿಗುಪಕಾರವೆಸಗುವೀ ಬಗೆಯೇಕೆ
ಪರದುಃಖ ಶಮನವನೆ ಬಯಸುವಾಸೆಯದೇಕೆ

ಮನುಜಗಾಯಿತ್ತೆ"ನುತ ನಾ ಧ್ಯಾನಪರನಾಗೆ
ಜಗದ ಸಚ್ಚರಿತೆಗಳು ನನ್ನ ಚಿತ್ತದಿ ತೂಗೆ,
"ಹಿಂಡಿನಗಲಿದ ಮೃಗಕೆ ಹಿಂಡೊಂದೆ ಹಂಬಲಿಕೆ
ಭೂತಂಗಳೊಳು ಚೆದರಿ ಭೀತವಾದಾತ್ಮಕ್ಕೆ
ಭೂತಹಿತರತಿ ಸಚ್ಚಿದಾನಂದ ಸಂಗತಿಗೆ
ಆನಂದದೀ ತುಯ್ತಕನುವಾಗುವಾ ಮತಿಗೆ
ಇಂಥ ನಡೆಯೇ ಸಹಜ"ವೆಂದಾನು ಭಾವಿಸಿರೆ—
ತೀರ್ಥಸಾನ್ನಿಧ್ಯದೊಳು ಮನ ಭವ್ಯವಾಗುತಿರೆ—

ಸಂಧ್ಯಾಸ್ತನತ್ರುಟಿತ ಅಮೃತಬಿಂದುಗಳೆನಲು
ಮೂಡಿರ್ದುವಾಗಸದೊಳಲ್ಲಲ್ಲಿ ಚುಕ್ಕಿಗಳು.
ಎಡಬಲದ ಕಂದರದಿ ಸೃಷ್ಟಿ ಸುಪ್ತಿಯೊಳಿತ್ತು
ಋಷಿಗಣವ ನಲಿಪನೆನೆ ತನ್ನ ದರ್ಶನವಿತ್ತು
ಸುಂದರಶ್ಯಾಮನಾ ನಭೋಮಂಡಲದಲ್ಲಿ
ತೆರೆತುಂತುರಂತರಿಲು ತೊಳಗುತಿರೆ ವ್ಯೆಯಲ್ಲಿ
ಕ್ಷೀರಸಾಗರದಲ್ಲಿ ಪವಡಿಸಿರುವಂದದೊಳು
ಯಾಮಿನೀಕಾಳಿಮದ ವಿಕ್ರಾಂತರೂಪದೊಳು
ಮೇಲೆ ಮೆರೆದನು ದಿವ್ಯ ವಿಶ್ವರೂಪವ ತೋರಿ.
ಅರಿವತ್ತ ಪರಿಯುತಿರೆ ನನ್ನ ಮನದಿಂ ಜಾರಿ
ನಿಶ್ಚಲ ನಿರಂಜನಂ ನಿರ್ವಿಕಲ್ಪಕಭಾವ
ನಿಷ್ಕಳ ನಿರಾಖ್ಯಾತ ಶುದ್ಧನೇಕೋದೇವ
ಎಂಬ ಶ್ರುತಿಮರ್ಮರಂ ನನ್ನ ಚೇತದಿ ಮೊರೆಯೆ
ಸದ್ದರ್ಶನಾನಂದವನುಭಾವದೊಳು ನೆರೆಯೆ;
ದಿವ್ಯಪ್ರಾದುರ್ಭಾವದರಿವು ಚಿತ್ತವ ಸೋಕಿ
ಮೌನಕೆಡೆಮಾಡಿತೆನೆ ನೀತಿ ತರ್ಕವ ನೂಕಿ
ಮುತ್ತಣ್ಣಾ ದೊರೆಸಾಮಿ ಇರ್ವರೂ ಬಳಿಸಾರೆ,
ನನ್ನ ಸೋಕುತ ಕುಳಿತು ಸ್ಪರ್ಶದಿಂ ಸೊಗವೇರೆ
ತುಸಕಾಲವಲ್ಲಿರ್ದೆವೇಕಾನುಭವದೊಳಗೆ
ನಮ್ಮ ಹಂಕೃತಿ ಮರಳಿ ಎಚ್ಚರವ ತಹವರೆಗೆ.

# ನಾರಾಯಣನ ಕತೆ

"ಮಾತಾ ಸರ್ವಸ್ಯ ಲೋಕಸ್ಯ ಮಧುಸೂಧನಮಾನಿನೀ
ದರ್ವೀಮಾದಾಯ ಬಾಲಸ್ಯ ದದೌ ಭಿಕ್ಷಾಂ ಗೃಹೇ ಗೃಹೇ"
(ಯಾದವಗಿರಿ ಮಾಹಾತ್ಮ್ಯ)

"ಭವತಿ ಬಿಚಾಂದೇವಿ"ಯೆಂದು
ನಮ್ಮ ಮನೆಯ ಹೊಸಿಲ ಮುಂದು
ದಂಡಕೋಲುಛತ್ರಿ ಹಿಡಿದು
ಮನೆಯೊಡತಿಯ ತೊದಲಿ ಕರೆದು
ಕಾಡಿಗೆ ಕಪ್ಪಿಡಿದ ಕಣ್ಣು
ಪಿಳಪಿಳ್ಳನೆ ಬಿಡುವ ಚಿಣ್ಣ-
ನಾರು? ಆರ ಮನೆಯ ಕಣ್ಣು?
ಕೆನ್ನೆಯೊಳರಿಸಿನದ ಬಣ್ಣ
ಹೆಣ್ಣಿಗಿಂತಲಂದವಾಗೆ
ಜಡೆಗೆ ಕುಚ್ಚಿನೊಡವೆ ತೂಗೆ
ಜರಿಯ ಮಗುಟ ನಡುವಿನೊಳಗೆ
ಜಾರುತಿರಲು ಹೆಜ್ಜೆ ಮುಳುಗೆ
ಪಾತ್ರೆ ಹಿಡಿದ ಕೈಯೊಳದನು
ಎತ್ತಿಹಿಡಿದು ನಿಂತಿರುವನು,
ಭವದ ತೊಡರನುಡಲಾರದೆ
ಉಡುತಲಿರುವ ಹರಿಯ ತೆರದೆ
*ಜಪಿಸುತಿರುವ ನನಗೆ ತೋರಿ
ಲಜ್ಜೆ ನಗೆಯ ಮುದ್ದು ಬೀರಿ—
ಅಂದು ಭಿಕ್ಷವೆರೆದ ಹಸುಳೆ
ನನ್ನ ಧ್ಯಾನದೊಳಗೆ ಸುಸುಳೆ
ಮನೆಯ ಮನೆಯ ತಾಯಂದಿರು
ಸಿರಿಯ ತೆರದಿ ನಿಲ್ಲಲಿದಿರು
ಕಾಣುತಿಹೆನು ಹಳೆಯ ಕತೆಯ
ಯದುಗಿರಿಯೊಡತಿಯ ಮಮತೆಯ:

---

* ಉಪಾಕರ್ಮದ ಮಾರನೆಯದಿನದ ಗಾಯತ್ರೀ ಜಪ. ಆದಿನ ಹಸುಳೆಗಳೂ ಬ್ರಹ್ಮಚಾರಿಗಳೂ ಭಿಕ್ಷಾಚರ್ಯ ವ್ರತವನ್ನು ನಡೆಸುವುದು ಪದ್ಧತಿ.

"ಕೊಳ್ಳು ದೇವ ನೈವೇದ್ಯವ"
ಎಂದು ಒಂದೆ ಮನದೊಳಿರೆವ
ಕಣ್ಣ ಮುಚ್ಚಿ ಕರವ ಮುಗಿವ,
ಜಗದ್ಧರಣಗಾದ ಹಸಿವ
ತನ್ನ ಹಸಿವಿನಿಂದ ಅಳೆವ,
ಮಾಯವಾದ ನೈವೇದ್ಯವ
ಉಂಡನೆಂದೆ ಬಗೆದು ನಲಿವ,
ಉಂಡನೆಂದೆ ತಾಯಿಗುಲಿವ,
ಸುಚರಿತನೆಂಬಾತನಣುಗ
ನನ್ನ ಕಣ್ಣಿಗಾದನೀಗ.
ನಂಬುವಳೆಂತವನ ತಾಯಿ
ತಿಂದಿತೇನೊ ಬೆಕ್ಕು ನಾಯಿ
ಎಂದು ಮನದಿ ನೋವಳವಳು
ತನ್ನಣುಗನ ಬೈವಳವಳು
ಸಂತನ ಸತಿ ಒಡವೆಯವಳು
ಸಿರಿಯ ಕರುಣೆ ಕಾಣದವಳು.
ತನ್ನ ಕಷ್ಟ ಕಾರ್ಪಣ್ಯವೆ
ತನಗೆ ಕೊಡೆಯು ತೆರದೊಳೊದವೆ
ಎಲ್ಲೆಡೆ ಸುರಿವವಳ ದಯವ
ತನ್ನಿರವೊಳು ಕಾಣದಿರುವ
ಭಾಗ್ಯಹೀನೆ ಈ ಸುವ್ರತೆ
ನಾರಣನೆಂಬಿವನ ಮಾತೆ.
ಅವಳಿಗವಳೆ ತಿಳಿಯದವೊಲು
ಅವಳುದರದಿ ಮೂರ್ತಿಸಿದೊಲು
ಸಿರಿನಾರಣರೊಲುಮೆಕಿರಣ
ಜನಿಸಿಹನೀ ನಾರಾಯಣ.
ಬಡತನ ಬರಗಾಲ ಸೇರಿ
ಅವಳ ಬಾಳ ಹಿಂಡಿ ಹೀರಿ
ಆಸೆ ಹೀದೆಯುಳಿಸಿತೆನ್ನೆ
ಬದುಕಿಹುದೇ ಭಾಗ್ಯವೆನ್ನೆ,

ದ್ರವಿಡರರಸು ದಾನಿಯೆಂಬ
ಜಸದ ಗುಡುಗು ಊರುತುಂಬ
ಗುಡುಗುತ ಬರಲೀಕೆ ಕೇಳಿ
ಭಂಗ ನೀಗುವಾಸೆ ತಾಳಿ,
ತನ್ನಿಬ್ಬರು ಸುತರ ಜತೆಗೆ
ಪತಿಯನಟ್ಟಿ ಅತ್ತಕಡೆಗೆ
ಅಂತೊ ಎಂತೊ ಜೀವಿಸಿಹಳು
ಕಿರಿಯಣುಗನ ಪೋಷಿಸಿಹಳು.
ದೊರೆಯ ಸಮಯ ಕಾಯ್ವ ಕಷ್ಟ
ಅವನ ಕಂಡು ನುಡಿವ ಕಷ್ಟ
ನೀನೆ ದೇವರೆಂಬ ಕಷ್ಟ
ಭಕ್ತಗಂಡಗೆನಿತನಿಷ್ಟ
ಎಂದೂಹಿಸಲಾರಳಿವಳು ;
ತರುವ ಸಿರಿಯ ಕನಸೊಳಿಹಳು.
ಇಂತು ತಿರಿದುತಂದ ಹಣವ
ಹಾದಿ ಕಳ್ಳರೊಯ್ದ ಹದವ-
ನರಿಯಳೀಕೆ—ಇಂದು ಸುತನ
ಹಸಿವ ತಣಿಸಲಾರದವನ
ಕೈಗೆ ಬಿಕ್ಕೆ ಕುಕ್ಕೆಯಿತ್ತು
'ತಿರುಪೆ ಎತ್ತು' ಎಂಬಳತ್ತು.
ಕಲ್ಲ ದೇವರುಂಬುದೆಂತು
ಅನ್ನವಿತ್ತರುಣ್ಣದೆಂತು
ಉಣ್ಣದಿರಲು ಅನ್ನವೇಕೆ—
ಇಂಥ ಶುಷ್ಕತರ್ಕವೇಕೆ ?
ಹಸಿವು ತನ್ನ ತಿನ್ನುತಿರಲು
ತಿನ್ನಲನ್ನ ಕೈಯೊಳಿರಲು
ದೇವನ್ನೈವೇದ್ಯಕಿದನು
ಮೊದಲೊಪ್ಪಿಸೆ ಬಯಪ ಹವಣು
ಹಸುಳೆಗೊದಗುವಚ್ಚರಿಯನು
ಮೆಚ್ಚದಿರುವನಾವನಿಹನು ?

ಈ ಸಂಯಮಕೀ ಅರ್ತಿಗೆ
ಅಜ್ಞಬಾಲನೀ ಭಕ್ತಿಗೆ
ಅನ್ನ ಹರನು ಒಲಿದನೆನ್ನೆ
ಇದರ ಸುದ್ದಿ ಹರಡಿತೆನ್ನೆ
ಊರ ತಾಯಿ ಮೆಚ್ಚಿದರೆನೆ
ಮೆಚ್ಚು ಹೆಚ್ಚಿ ಹುಚ್ಚಾಯ್ತೆನೆ,
ಎಲ್ಲ ಮನದಿ ಲಕ್ಷ್ಮಿ ಕೂಡಿ
ಎಲ್ಲ ಮನದಿ ಸಿರಿಯೆ ಆಡಿ
ಎಲ್ಲರೆದೆಯ ಲೋಭವಳಿಸಿ
ಇಂದೀವುದೆ ಲಾಭವೆನಿಸಿ,
ತ್ಯಾಗವೊಂದೆ ಭೋಗವಾಗೆ
ವಾತ್ಸಲ್ಯವೆ ರಾಗವಾಗೆ
ಮುತ್ತು ಹವಳ ರತ್ನಗಳನೆ,
ಸುವ್ರತೆ ಏನಚ್ಚರಿ ಎನೆ,
ಬಿಕ್ಕೆಯೆರೆವ ಬಾಲಕನಿಗೆ
ಕೊಟ್ಟರು ಸಂತೋಷಮಿಗೆ
ಅವನ ಮೊಗದ ಕಳೆಯ ನೋಡಿ
ನಾರಣನಿವನೆಂದೆಯಾಡಿ.
ಜನದ ಮೊಗದ ಸಿರಿಯ ಕಂಡು
ಜನನಿಗಾದ ನಲವ ಕಂಡು
ಸಿರಿಯೆ ದಾನಗೈವಳೆಂಬ
ಎರೆಯೆ ನಾಚಲೇತಕೆಂಬ
ಬಡವೆಯಾಸೆ ತೀರುವಂತೆ
ಏಳುಬಾರಿ ತಿರಿಯುತಿಂತೆ
ಏಳುಬಾರಿ ಸಿರಿಯ ತಂದು
ಹಸಿವೆಯಿಂದ ಬಳಲಿ ನೊಂದು
ಮತ್ತೆ ಬಿಕ್ಕೆ ಎತ್ತೆ ಬರುವ
ಬಾಲಕನನು ಕಂಡು ನಗುವ
ಹೊನ್ನು ರನ್ನ ತಣಿಸವೆನುವ
ಅನ್ನವೆ ಸೈ ತಣಿವಿಗೆನುವ

ಪಂಚಭಕ್ಷ್ಯಪರಮಾನ್ನವ
ಲಲ್ಲೆ ಮಾತನಾಡಿ ಕೊಡುವ
ಮಾತೆಯುರನು ನಂದಿಸುತ್ತ
ಬಾಲ ಬಂದ ಜನನಿಯುತ್ತ.
ಮಿಕ್ಕ ಕತೆಯೊಳೇನಕ್ಕರೆ ?—
ರಾತ್ರಿಯೆಲ್ಲ ಎಚ್ಚತ್ತಿರೆ
ನಿಧಿನಾಗರಡೊಲು ಸುಮ್ರತೆ,
ಬಂದರು ಬದುಕಿದೆವೆನ್ನುತೆ
ಪತಿ ಸುಚರಿತ ಸುತರಿರ್ವರು.
ಕತೆಯೊರೆದೊರ್ವರಿಗೊರ್ವರು
ಅಚ್ಚಚ್ಚರಿಪಡುತೆಲ್ಲರು
ನಾರಣನನು ಮುದ್ದಿಟ್ಟರು.
“ ಎಲೆಲೆ ನಮ್ಮ ಮನೋರಥನೆ
ಯದುಗಿರಿಸಿರಿ ಭಗೀರಥನೆ
ನಮ್ಮ ಸುಕೃತಕಲ್ಪತರುವೆ
ಪರಂಧಾಮನನುಗ್ರಹವೆ
ನಮ್ಮಳಲಿನ ಬಿಸಿಲ ಚಂದ್ರ
ನಮ್ಮ ಸೊಗದ ದೇವೇಂದ್ರ,
ಅಂದು ಗಂಗೆಯರಸಿ ಹೋದೆ
ಕಂಗಳಿದಿರೆ ಕಾಣದಾದೆ
ಕೊನೆಗೆ ಇಲ್ಲೆ ಕಂಡೆನವಳ.
ದೊರೆಯಲಿಲ್ಲವೆಂದು ಕವಳ
ದೊರೆಯ ದೊರೆಯ ತಿರಿದೆ ನಾನು
ಇಲ್ಲೆ ಇರಲು ಕಾಮಧೇನು.
ಎನ್ನ ಚಿಣ್ಣ ನಾರಾಯಣ,
ನಮ್ಮಜ್ಞತೆಯನಾವರಣ
ನಿನ್ನಿನಾಯ್ತು ಕೃಪಾವರಣ
ಇನ್ನು ನಾ ಅನನ್ಯಶರಣ ”
ಎಂದು ಹೊಗಳಿ ಹರಕೆಯಿಟ್ಟು
ಹರಿಗೆಲ್ಲವ ಮೀಸಲಿಟ್ಟು

ಸುಚರಿತ ಅನ್ವರ್ಥನಾಗೆ,
ಸುವ್ರತೆ ನಾಸಕ್ತೆಯಾಗೆ,
ಲೋಭ ಮೋಹ ಮುಕ್ತರಾಗಿ
ಸತ್ಕಾರ್ಯದಿ ಸಿರಿಯ ನೀಗಿ
ಸೊಗಮಿದ್ದರು ಭಕ್ತರಾಗಿ
ಸದಾನಂದ ಯುಕ್ತರಾಗಿ.

ಓ ಜನನೀ ಯದುಗಿರಿ ಸಿರಿ,
ಓ ನಾರಾಯಣ ಸಹಚರಿ
ನೆನೆದೊಡೆನ್ನ ಬಗೆಯ ಸೊಗವೆ
ಎಲ್ಲಿದ್ದರು ನಿನ್ನ ಮುಗುಳೆ
ನಾನು—ಇಲ್ಲ ಬೇರೆ ತಾಣ.
ಉಣ್ಣುವನ್ನ ಸ್ತನ್ಯಪಾನ
ಕಾಂಬ ಚೆಲುವು ನಿನ್ನ ನೋಟ
ಆಪ್ತ ಸೊಗವು ನಿನ್ನ ಮಾಟ
ಎಲ್ಲ ಹಾಡು ನಿನ್ನ ಲಲ್ಲೆ
ಇಲ್ಲ ನಿನ್ನ ಕರುಣೆಗೆಲ್ಲೆ.
ಕಣಿವೆಯ ನೀರವತೆಯಲ್ಲಿ
ಮಲಗಿಹೆ ನೀ ಪ್ರಭೆಯ ಚೆಲ್ಲಿ
ಘನಶ್ಯಾಮನುರದ ಮೇಲೆ
ಬಿನದದಿಂದ ಬಿಡುವಿರುವೊಲೆ.
ನಿನ್ನುಲ್ಲಸ ಹಕ್ಕಿ ಹಾಡು
ಹೊಳೆವ ಕಿರಣ ನಿನ್ನ ನೂಡು
ಕೆರೆಯ ತಂಪು ನಿನ್ನ ಸ್ಪರ್ಶ
ಮಂದಿಯೊಲುಮೆ ದಯಾವರ್ಷ
ಮಲೆಯ ಗಾಳಿ ನಿನ್ನಪ್ಪುಗೆ
ಮನದ ನಲ್ಮೆ ನಿನ್ನೊಪ್ಪಿಗೆ.
ಭಗಣದೀಪ್ತವಿಭಾವರಿಯ
ಬೆಳುದಿಂಗಳ ಪ್ರಭಾವಳಿಯ

ಯದುಗಿರಿನಭದುತ್ಸವವೇ
ನನ್ನೆರಕೆಯ ಚಿತ್ಸುಖವೇ
ತರಂಗಿಣೀ ಗೀತಾಪ್ರಿಯೆ
ಚಿದಚಿತ್ ಸೌಂದರ್ಯಾಶ್ರಯೆ,
ಪದುಮದಿಂದ ಉದಿಸಿ ಬಂದ
ಹೊಳಹೊಳೆಲ್ಲ ಹೊಳೆದು ನಿಂದ
ಯದುಗಿರಿನಾಯಕಿ, ತಾಯೇ
ನಾರಣನೊಲು ನನ್ನ ಕಾಯೆ!
ಇಂದು ಭವತಿ ಬಿಚ್ಚಾಂದೇವಿ
ಎಂಬೆಳೆಯಗೆ ನನ್ನಳೋವಿ
ನುಡಿಸಿ ಭಕ್ಷ್ಯವೆರೆವ ರೀತಿ
ನನ್ನ ನುಡಿಗು ತೋರು ಪ್ರೀತಿ.
ನೆನೆವೆ ಜನನಿ—ಶರಣು ಜನನಿ
ಜಯತು ತೇ—ನಮೋಽಸ್ತು ತೇ
ನಮೋಽಸ್ತು ತೇ.



6*

# ಕವನಗಳ ಅಕಾರಾದಿ

# ಮೊದಲ ಚರಣಗಳ ಅಕಾರಾದಿ



# ಪು. ತಿ. ನರಸಿಂಹಾಚಾರ್ಯರ ಕೃತಿಗಳು

## ಕವನಸಂಗ್ರಹಗಳು :

**ಹಣತೆ :** ಕ್ರೌನ್ ಅ. ೧೬ + ೯೪ ; ಬೆಲೆ, ರೂ. ೧—೪—೦.

. . . ಇವರ ಕಾವ್ಯವೋ ಹೊಸ ಸಾಹಿತ್ಯದ ಅತ್ಯುತ್ತಮ ಕೃತಿಯಲ್ಲಿ ಸೇರತಕ್ಕದ್ದಾಗಿದೆ. . . . ಇಲ್ಲಿ ಕಾಣುವುದು ಕಾಳಿದಾಸ, ವರ್ಡ್ಸ್‌ವರ್ತ್ ಕವಿಗಳು ಜೊತೆಯಾಗಿ ತಿದ್ದಿದ ಕವಿ ಮನೋಧರ್ಮ.

—ಶ್ರೀನಿವಾಸರ ಮುನ್ನುಡಿಯಿಂದ.

ಶ್ರೀಮಾನ್ ನರಸಿಂಹಾಚಾರ್ಯರ ಕವನಗಳಲ್ಲಿ ಅವನ್ನು ಓದಿದಷ್ಟೂ ಹೆಚ್ಚು ಬೆಲೆಯೂ ಅರ್ಥವೂ ಸ್ವಾರಸ್ಯವೂ ಕಂಡುಬರುತ್ತವೆ. . . . ಈ ಕವನಗಳಲ್ಲಿ ಅಮೋಘವಾದ ಜೀವನಾನುಭವವೂ ಆ ಅನುಭವಕ್ಕೆ ಕಾವ್ಯರೂಪವನ್ನು ಕೊಡುವ ಶಕ್ತಿಯೂ ತೋರಿಬರುತ್ತವೆ.

—ಪ್ರಬುದ್ಧ ಕರ್ಣಾಟಕ.

**ಮಾಂದಳಿರು :** ಕ್ರೌನ್ ಅ. viii + ೬೩ ; ಬೆಲೆ, ರೂ. ೧—೦—೦.

ಪ್ರಕೃತಿಸೌಂದರ್ಯವನ್ನು ಹೇಗೋ, ಹಾಗೆಯೇ ಮಾನವಜನ್ಮದ ರಹಸ್ಯವನ್ನು ಇವರು ಮರೆಯಲಾಗದ ಮಾತುಗಳಲ್ಲಿ ಹೇಳಬಲ್ಲರು. . . . ಇವರ ಗೀತಗಳನ್ನೋದುವವರಿಗೆ ಚೇತನಾಚೇತನವೆಂಬ ಬಳಕೆಯ ಭೇದಭಾವನೆಯು, ಯೋಗಿಗಳಿಗೆ ಯೋಗಬಲದಿಂದಾಗುವಂತೆ, ತಾತ್ಕಾಲಿಕವಾಗಿ ವಿಗಳಿತವಾಗುವುದು.

—ಪ್ರೊ. ಎಂ. ಹಿರಿಯಣ್ಣ.

**ಶಾರದಯಾಮಿನಿ :** ಕ್ರೌನ್ ಅ. ೭ + ೪೯; ಬೆಲೆ, ರೂ. ೧—೮—೦.

I have not failed to catch glimpses, now and again, of their exceeding beauty.

—ಪ್ರೊ. ಎಂ. ಹಿರಿಯಣ್ಣ.

I have enjoyed reading the pieces. Fine feeling in flowing words—that is always a joy.

—ಡಿ. ವಿ. ಗುಂಡಪ್ಪ.

The twenty-five pieces collected in Sarada Yamini . . . are a mixed dish. The whole is a tooth-some repast for whoever loves modern Kannada Verse. —*The Hindu.*

. . . It is a valuable contribution to contemporary Kannada Literature.
—*Triveni.*

# ಕಥೆಗಳು, ಚಿತ್ರಗಳು :

**ರಾಮಾಚಾರಿಯ ನೆನಪು :** (ಎರಡನೆಯ ಮುದ್ರಣ) ಕ್ರೌನ್ ಅ. ೬ + ೯೭ ಬೆಲೆ, ರೂ. ೧—೪—೦.

ಶ್ರೀಮಾನ್ ಪು. ತಿ. ನರಸಿಂಹಾಚಾರ್ಯರ ಬರವಣಿಗೆಯಲ್ಲಿ ಅವರದೇ ಆದ ಒಂದು ಉಕ್ತಿ ಶಕ್ತಿಯೂ, ನೋಟದ ಅಥವಾ ಅನುಭವದ ರೀತಿಯೂ ಇವೆ. ಗದ್ಯದಲ್ಲಿಯೂ ಹಾಗೇ, ಪದ್ಯದಲ್ಲಿಯೂ ಹಾಗೇ ; . . .

ಕಿರಿದರಲ್ಲಿ ಹಿರಿದನ್ನು ಕಾಣಿಸುವ ಜಾಣತನವು—ಪಂಕ್ತಿ ಪಾದಗಳ ಒಂದೊಂದು ಮಾತಿಗೂ ಭಾವವನ್ನೂ ಅರ್ಥವನ್ನೂ ಹಾಯಿಸಲೆಳಸಿ ಅವನ್ನು ಶಿಲ್ಪದಂತೆ ಕಡೆಯುವ ಕೆಲಸವು—ಇವರ ಕೃತಿಗಳಲ್ಲೆಲ್ಲಾ ಕಾಣಬರುವುದು.

—ಪ್ರಬುದ್ಧ ಕರ್ಣಾಟಕ.

**ರಥಸಪ್ತಮಿ ಮತ್ತು ಇತರ ಚಿತ್ರಗಳು :** ಕ್ರೌನ್ ಅ. ೪ + ೬೪. ಬೆಲೆ, ರೂ. ೧—೦—೦.

ಗದ್ಯಕ್ಕಿಂತ ಪದ್ಯಕ್ಕೆ ತಮ್ಮ ಒಲವು ಹೆಚ್ಚು ಎಂದು ಹೇಳಿಕೊಳ್ಳುವ ಶ್ರೀ ಪು. ತಿ. ನರಸಿಂಹಾಚಾರ್ಯರು ಉತ್ತಮವಾದ ಗದ್ಯವನ್ನು ಕೂಡ ಬರೆಯಬಲ್ಲರೆಂಬುದು ಈ ಚಿತ್ರಗಳನ್ನು ಓದುವವರಿಗೆ ಗೊತ್ತಾಗದಿರದು. ರಥಸಪ್ತಮಿ, ಗೋಕುಲಾಷ್ಟಮಿ, ವೈಲಮಾಳಿಗೆ ಉತ್ಸವಗಳಲ್ಲಿ ಆ ಆ ದಿನಗಳ ಸಮಾರಂಭವನ್ನು ಯಥಾವತ್ತಾಗಿ ಮನಂಬುಗುವಂತೆ ವರ್ಣಿಸುವುದರಲ್ಲಿ ಇವರು ಎತ್ತಿದ ಕೈ. ಗೂಳಿಯೊಂದಿಗೆ ಇವರು ನಡೆಸಿದ ಸುದೀರ್ಘ ಹರಟೆಯಲ್ಲಿ ವಿಚಾರಗಳ ಬಲೆಯನ್ನು ಹರಡುತ್ತ ಹೋಗುವ ರೀತಿ ಮೋಹಕವಾಗಿದೆ. ಇತರ ಚಿತ್ರಗಳಲ್ಲಿಯೂ ರಾಮಣೀಯಕತೆ, ಅದರಂತೆ ವಿಚಾರಗಳ ಗಂಭೀರ ಭಾವವು ಹೆಚ್ಚಾಗಿದ್ದು ಓದುವವರಿಗೆ ಇದೊಂದು ಬಿಡಲಾರದ ಪುಸ್ತಕವನ್ನಾಗಿ ಮಾಡಿದೆ.

ಎಲ್ಲ ಚಿತ್ರಗಳಲ್ಲಿಯು ವಿಚಾರಪರತೆ ಅವುಗಳಿಗೆ ಕಳೆ ಇತ್ತಿವೆ. . . .

—ಕರ್ಮವೀರ.

. . . . ಸೊಗಸಾದ, ಸುಂದರವಾದ, ಆದರೆ ಗಂಭೀರ ಸಾಹಿತ್ಯಕ ಶೈಲಿಯಲ್ಲಿ ಬರೆದಿದ್ದಾರೆ. . . .

—ಪ್ರಜಾಮತ.

Here are portraits of some of the important Hindu festivals and of a few natural scenes that have stirred the mind of the author; the former evoke from him some really useful reflections on cardinal problems of theology and religion; and the latter afford him an opportunity to portray familiar scenes in Hindu social life. We are told of the beauties of religious experience, and of the triumph of belief over arguments, of faith over pure reason.

Shri Narasimhachar's is quite a familiar name among Kannada writers, and the present booklet is one more proof of his powers of observation and description. —*The Indian P.E.N.*

**ಧ್ವಜರಕ್ಷಣೆ** (ಎಂಟು ಕಥೆಗಳು) ಕ್ರೌನ್ ೮. ೪ + ೯೪ + ii. ಬೆಲೆ, ರೂ. ೧-೪.

'ಧ್ವಜರಕ್ಷಣೆ' ಎರಡು ಕಾರಣಗಳಿಂದ ಸಾಹಿತಿಗಳ ಸುಸ್ವಾಗತಕ್ಕೆ ಅರ್ಹವಾಗಿದೆ. ಆಧುನಿಕ ರಾಜಕೀಯ ವಾತಾವರಣವನ್ನು ಅದ್ಭುತವಾಗಿ ಚಿತ್ರಿಸಿರುವ ಮೊದಲ ಕಥೆಗಾಗಿ ಮತ್ತು ಮಾನಸಿಕ ಭಾವಗಳನ್ನು ಸರೂಪಕ ಶೈಲಿಯಲ್ಲಿ ಮಳೆಬಿಲ್ಲಿನಂತೆ ಹರಡುವ ಈ ಕಥೆಗಳ ಕಲೆಗಾಗಿ. ಕವಿಯ ಮನೋಭಾವವು ಎಲ್ಲವುಗಳಿಗೂ ಏಕವಾದರೂ ಈ ಕಥೆಗಳ ವಸ್ತುವೈವಿಧ್ಯ ವಿಸ್ಮಯಗೊಳಿಸುವಂತಹುದು.

ಕನ್ನಡ ಸಣ್ಣ ಕತೆಯ ಸಂಪತ್ತನ್ನು ಶ್ರೀಮಾನ್ ನರಸಿಂಹಾಚಾರ್ಯರು 'ರಾಮಾಚಾರಿಯ ನೆನಪು' ಎಂಬ ಸಂಕಲನದಿಂದ ಹಿಂದೆ ಹೆಚ್ಚಿಸಿದಂತೆ, 'ಧ್ವಜರಕ್ಷಣೆ'ಯಿಂದ ಇನ್ನಷ್ಟು ಹೆಚ್ಚಿಸಿದ್ದಾರೆ.

—ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ.

. . . I have greatly appreciated the stories contained in it. They are really much more than short stories ; they are miniature studies of human nature

—ಪ್ರೊ. ಎಂ. ಹಿರಿಯಣ್ಣ.

"ಧ್ವಜರಕ್ಷಣೆ", ಸಂಗ್ರಹದ ಮೊದಲನೆ ಕತೆ, ಉತ್ತಮ ಕಲಾಕೃತಿ . . . . . 'ವಿಷಾದ ಯೋಗ'ದಲ್ಲಿ ಅಲಸಪ್ರವೃತ್ತಿಯ ಭಗ್ನ ಮನೋರಥನೊಬ್ಬನ ನಿಸ್ಸಹಾಯ ಮನೋಲಹರಿಗಳ ಚಿತ್ರಣವಿದೆ. "ರಾಗಿಣಿ", ಕಂಟ್ರಾಕ್ಟರ ರಾವುಸಾಹೇಬರ ಮಗಳು, ಅವರ ಕೂಲಿ ಮೇಸ್ತ್ರಿಯಲ್ಲಿ ಅನುರಕ್ತಳಾಗಿ ಓಡಿಹೋದುದನ್ನು ಬದಲಿಸುತ್ತಿರುವ ಜಗತ್ತಿನ ಹಿನ್ನೆಲೆಯಲ್ಲಿ ಚಿತ್ರಿಸಲಾಗಿದೆ. "ಕಾಲನೊಡನೆ ಅಶ್ವತ್ಥನ ಸ್ಪರ್ಧೆ" ಬಹುಶಃ ಸಂಗ್ರಹದಲ್ಲೆಲ್ಲ ಅತ್ಯುತ್ತಮ ಕಥೆ. ಕಥೆಯೇ ಇಲ್ಲದ ಈ ಕಥೆಯಲ್ಲಿ ಕಾಲನು ಸಹಸ್ರ ರೂಪಗಳಿಂದ ತನ್ನ ಮೇಲೆ ನಡೆಸಿದ ವೈವಿಧ್ಯ ಪೂರ್ಣ ವಂಚನೆಯನ್ನು . . . . . "ಅಶ್ವತ್ಥ ಬಣ್ಣಿಸಿದ್ದು ಅತ್ಯಂತ ಮಾರ್ಮಿಕವೂ ಸ್ವಾರಸ್ಯ ಪೂರ್ಣವೂ ಇದೆ" . . . "ನಿಂಗಿಯೋ ಲವಂಗಿಯೋ'ದಲ್ಲಿ ಸ್ತ್ರೀಯ ಸರ್ವಂಸಹನೆ ಗಂಡಸಿನ ಮಹಾಪರಾಧಗಳನ್ನು ಕ್ಷಮಿಸುವ ರೀತಿಯನ್ನು ಚಿತ್ರಿಸಲಾಗಿದೆ. "ಕೊಳಂದೆ" ಈ ಸಂಗ್ರಹದ ಇನ್ನೊಂದು ಉತ್ತಮ ಕಥೆ. . . . . .

ಈ ಕಥೆಗಳನ್ನೋದಿದ ಮೇಲೆ ಹೊಳೆಯುವ ಒಂದು ಮಾತೆಂದರೆ, ಶ್ರೀ ಪು. ತಿ. ನ. ಅವರು ಪ್ರಾಮುಖ್ಯತಃ ಕವಿಗಳು ಮತ್ತು ಆದ್ಯಂತವೂ ಕವಿಗಳು ಎಂಬುದು . . . . "ಧ್ವಜರಕ್ಷಣೆ", "ಕಾಲನೊಡನೆ ಅಶ್ವತ್ಥನ ಸ್ಪರ್ಧೆ", "ಕೊಳಂದೆ"ಗಳು ಈ ಸಂಗ್ರಹದ ಪ್ರಕಾಶನವನ್ನು ಪೂರ್ಣವಾಗಿ ಅಭಿನಂದನೀಯವಾಗಿ ಮಾಡಿವೆ.

—ಕರ್ಮವೀರ.

The lyric poet is not generally successful as a short-story writer. There are exceptions, of course, like Mr. P. T. Narasimhachar. His lyrics are unsurpassed for their melody, and for a certain uninvolute, direct appeal. In *Ramachariya Nenapu* Mr. Narasimhachar showed that he was a story-teller of no mean ability . . . . the first story here, which has given the book its name, a deeply passionate tale . . . . is good, and even great, the others . . . are . . . very good as descriptive essays, giving us specimens of beautiful, decorative prose.

As with all 'Kavyalaya' publications, the get-up is handsome.

—*The Indian Express.*

# ಗೀತರೂಪಕಗಳು

**ಅಹಲ್ಯೆ:** ಕ್ರೌನ್ ಅ. xxiv + ೧೨೩. ಬೆಲೆ, ರೂ. ೨—೦—೦ ; ರೂ. ೩—೦—೦.

ಅಹಲ್ಯೆ, ಇಂದ್ರ, ಗೌತಮ,—ಈ ಮೊದಲಾದವರ ನಡೆವಳಿಕೆಯ ರೀತಿಯೇನು, ಅರ್ಥವೇನು? ಇವರನ್ನು ಉದ್ರೇಕಿಸಿದ ಭಾವಗಳೇನು? ಇವರ ಕಥೆಯಲ್ಲಿ ಅಡಕವಾಗಿರುವ ಸಮಸ್ಯೆಯೇನು? . . . . . (ಇವನ್ನು) ನಮ್ಮ ಮುಂದಿರುವ ಕೃತಿ ತೋರಿಸುತ್ತದೆ.

ಇದರಲ್ಲಿ ಹಿನ್ನೆಲೆ ಮುನ್ನೆಲೆಯೆಂಬ ಭೇದವಿಲ್ಲದೆ, ಪ್ರಕೃತಿಯೊಂದಿಗೆ ಪಾತ್ರಗಳೂ ಪಾತ್ರಗಳೊಂದಿಗೆ ಪ್ರಕೃತಿಯೂ ಸಮತಾನವಾಗಿ ಎದೆ ಮಿಡಿಯುವುದನ್ನು ನೋಡಬಹುದು. ಈ ನಾಟಕದ ಉದ್ದಕ್ಕೂ ಬರುವ ವರ್ಣನೆಗಳಂತೂ ಉಜ್ವಲ ಪ್ರತಿಭೆಯಿಂದಲ್ಲದೆ ಹೊಮ್ಮುವುದು ಅಸಂಭವ. . . . ಇನ್ನು ಅವಿರತವಾಗಿ ಗೋಚರಿಸುವ ನಾಟಕಕಾರರ ಸೂಕ್ಷ್ಮದೃಷ್ಟಿ, ಧ್ವನಿಪೂರ್ಣವಾಗಿ ಮಾತುಗಳನ್ನೂ ಸಂಗತಿಗಳನ್ನೂ ಜೋಡಿಸುವ ಶಕ್ತಿ, ಛಂದಸ್ಸಿನಲ್ಲಿ ಬಗೆಬಗೆಯ ಪ್ರಯೋಗಗಳನ್ನು ನಡಸಿ ಹೊಸ ಸೊಗಸುಗಳನ್ನು ಹಲವೆಡೆಗಳಲ್ಲಿ ಸಾಧಿಸಿರುವ ಕೌಶಲ—ಈ ಮೊದಲಾದದ್ದನ್ನೆಲ್ಲಾ ಇಲ್ಲಿ ವಿವರಿಸಲು ಅವಕಾಶವಿಲ್ಲ. . . .''

—ತೀ. ನಂ. ಶ್ರೀಕಂಠಯ್ಯನವರ ಪ್ರಸ್ತಾವನೆಯಿಂದ.

It has more than half-a-dozen songs of entrancing, haunting melody which are sure to keep fresh through time. The verse dialogue, the solo songs and choruses, the beauties of nature and other description score all along in memorable utterance; the flexibility and variety of the metres employed, suiting situation or the prevaling need and mood are evidence of a high technical achievement.

—*The Hindu.*

**ಗೋಕುಲ ನಿರ್ಗಮನ:** ಕ್ರೌನ್ ಅ. ೧೦ + ೭೨, ಬೆಲೆ, ರೂ. ೧—೦—೦.

ಕೃಷ್ಣನು ಮಥುರೆಗೆ ಹೋಗುವ ಮುನ್ನಾ ದಿನ ಕೊನೆಯ ಬಾರಿ ಕೊಳಲೂದಿ ವೃಂದಾವನದ ಭಕ್ತರನ್ನೆಲ್ಲ ತಣಿಸಿದ ಸನ್ನಿವೇಶವನ್ನು ಆಧಾರವಾಗಿಟ್ಟುಕೊಂಡು ಈ ನಾಟಕವನ್ನು ರಚಿಸಿದ್ದಾರೆ. . . .

ಪು. ತಿ. ನರಸಿಂಹಾಚಾರ್ಯರಿಂದ ಕಾವ್ಯರಚನೆಯಾಗುವುದು ಸರಸವಾಗಿ ಇಂಪಾದ ರಾಗಗಳಲ್ಲಿ. ಸೊಂಪಾಗಿ ಹಾಡಬಲ್ಲ ಗೀತಗಳನ್ನು ರಚಿಸಿರುವರು ಅವರು. ಸುತ್ತಲಿನ ಜಗತ್ತನ್ನು ತೆರೆದ ಕಣ್ಣಿನಿಂದ ನಿರೀಕ್ಷಿಸುತ್ತಿರುವ ಇವರು ತಮ್ಮ ಗೀತಗಳಲ್ಲಿ ಲೋಕಾನುಭವವನ್ನು ತುಂಬಿದ್ದಾರೆ. ವೃಂದಾವನಕ್ಕೇ ತನ್ನ ಕೊಳಲಿನುಲಿಯಿಂದ ಮೋಹಿನಿಯನ್ನು ಬೀರಿದ ಕೃಷ್ಣನ ಪಾತ್ರನಿರ್ಮಾಣದಲ್ಲಿ ವಿಶೇಷ ಪರಿಶ್ರಮ ತೋರಿದಾರೆ.

. . . ವೃಂದಾವನವನ್ನು ಕೃಷ್ಣನು ಬಿಡುವಾಗ ಎಲ್ಲರಲ್ಲಿಯೂ ಮೂಡಿದ ದುಗುಡದ ಸನ್ನಿವೇಶ ಕವಿಯ ಮನಸ್ಸನ್ನು ಆವರಿಸದೆ ಬಿಟ್ಟಿಲ್ಲ.

—ಕರ್ಮವೀರ.

In particular, the present piece, it seems to me, illustrates beautifully how music, if it is properly approached, has the power to evoke the divine that is latent in human nature.

—ಪ್ರೊ. ಎಂ. ಹಿರಿಯಣ್ಣ.

The poet revels in imagery and his power to create song and lyrical patterns is on the increase. . . . The movement of the play is sprightly and smooth. . . .

. . . One is held prisoner throughout by the music of the poem.

—*The Hindu.*

Some of the songs in this play can be classed among the best pieces of modern Kannada Poetry.

—*Triveni.*

. . . Radha's Krishna and Krishna's Radha figuring the ideal of love to them all, their ecstacy woven into a succession of symphonic movements of about fifty lyrics transporting us to rare joy.

. . . the dream music in this lyric play. So much does the poet come under the spell of his own art. Dance song, poetry, the moonlit night, the communion of rare souls, the enchantment of the flute, the end of a phase of life, the atmosphere of love enveloping age and youth alike.

. . . This play bodies fourth a dream which haunts us all. Radha and Krishna are its central figures, concrete embodiments of our own aspiration. We are grateful to the poet for projecting this vision of his into Kannada. I hope this play will add to the poet's reputation . . . The songs of Radha and the Rishis, Sri Krishna's dance song and the song before renouncing the flute are exquisite lyrics in themselves.

—*D. R. Bendre, in the Indian P.E.N.*

**ದೋಣಿಯ ಬಿನದ** ಮತ್ತು **ಕವಿ:** ಕ್ರೌನ್ ೮. ೮ + ೬೦. ಬೆಲೆ, ರೂ. ೧—೦—೦.

If in 'Ahalya' the author expounded his philosophy of Love he here (in 'Kavi') enounces one on Beauty as the supreme essence, the crown of a series which rises in a crescendo of movement and presentation.

. . . the 'Kavi' is a pleasing piece of composition which we feel will advance our poet's reputation as it will add to the body of his work.

—*The Hindu.*

Mr. Narasimhachar is a true Nature-poet whose perception of Nature is a happy blend of poetry and philosophy.

—*Triveni.*

**ಶಬರಿ:** ಕ್ರೌನ್ ೮. ೩೬ + ೬ ಬೆಲೆ, ರೂ. ೦—೮—೦.

I have read with great interest your new play of *Śabarī*. . . . It beautifully embodies in poetry and song the higher ideal of ancient Indian life, spiritual freedom—the soul's longing for it and its attainment through divine grace.

—ಪ್ರೊ. ಎಂ. ಹಿರಿಯಣ್ಣ.

. . . ಶ್ರೀರಾಮನ ದರ್ಶನಕ್ಕಾಗಿ ಶಬ[illegible] ರ್ಘ[illegible] [illegible]ಗದ . . .
. . . ಕಥೆ ಇಷ್ಟೇ ಇದ್ದರೂ ಶ್ರೀ ನರಸಿಂಹಾಚಾರ್ಯರು ಅದನ್ನು [illegible]ಸುವಲ್ಲಿ ಕೌಶಲ್ಯ ತೋರಿಸಿದ್ದಾರೆ . . .

—ಕರ್ಮವೀರ.

Among modern Kannada writers, Mr. P. T. Narasimhachar occupies a high place as a master of word-music and lyric patterns. . . . The episode of Shabari in the *Ramayana* is quite a touching one. . . . In the hands of the author, this simple theme is invested with a rich significance. Shabari's anxious and selfless yearning for the arrival of Rama and her ecstatic happiness at the end are brought out with delicacy and artistic skill. The melody of the songs is for the most part pleasing, . . . It is an experiment at evolving a new literary form in Kannada. The get-up and printing are good, and we hope that Shabari will be quite popular.

—*The Indian P.E.N.*

ಶ್ರೀಮಾನ್ ಪು. ತಿ. ನರಸಿಂಹಾಚಾರ್ಯರು . . . ಶಬರಿಯ ಸಿದ್ಧ ಜೀವಕ್ಕೆ ಮುಗ್ಧಭಾವ ವಿಲಾಸವನ್ನು ಬೆರಸಿ ಹೊಸ ನೋಟದಿಂದ ನಾಟಕವನ್ನು ರಚಿಸಿದ್ದಾರೆ.

ಮಾತಿನ ಇಂಪು, ಭಾವದ ನಯ, ಮನಸ್ಸಿನ ಹದ, ಆಧ್ಯಾತ್ಮದ ಶಾಂತಿ—ಇವು ಶ್ರೀಮಾನ್ ನರಸಿಂಹಾಚಾರ್ಯರ ಕವಿತೆಯ ಸಾಮಾನ್ಯ ಗುಣಗಳು. ಈ ಗುಣಗಳು ಶಬರಿಯಲ್ಲೂ ಚೆನ್ನಾಗಿ ಒಡಮೂಡಿವೆ. ಈ ಗೀತರೂಪಕದಲ್ಲಿ, ಇನ್ನು ಸುಲಭಮಾಡಲು ಸಾಧ್ಯವೆ ಎಂಬಷ್ಟು ಸರಳ ಆದರೂ ಗಂಭೀರವಾದ ಶೈಲಿ ಕಂಡುಬರುತ್ತದೆ. ಭಕ್ತಿಯ ಮಾತಾಗಲಿ ಮುಕ್ತಿಯ ಮಾತಾಗಲಿ ಬಹು ಮುದ್ದಾಗಿದೆ. ಕೃತಿಕೃತಿಗೂ ಈ ಕವಿಗಳ ಕೈ ಸಿದ್ಧವಾಗುತ್ತಿದೆ; ಇವರ ಕೃತಿಸತ್ತ್ವ ಬಲಿಯುತ್ತಿದೆ. ಇದಕ್ಕಾಗಿ ನಮಗೆ ಸಂತೋಷ, ಹೆಮ್ಮೆ.

—ಕನ್ನಡ ನುಡಿ.

---

**ಗಣೇಶ ದರ್ಶನ:** ಕ್ರೌನ್ ಅ. viii + ೮೩ + ೮. ಬೆಲೆ, ರೂ. ೧—೮—೦ ; ೨—೮—೦.
೩೩ ಕವನಗಳ ಸಂಕಲನ.

PRINTED IN INDIA BY M. HORWOOD, AT THE WESLEY PRESS AND PUBLISHING HOUSE MYSORE CITY, AND PUBLISHED BY K. CHIDAMBARAM, KAVYALAYA, MYSORE.